ಶ್ರೀರಸ್ತು.

ಜಯ ಸೊರ್ಪ್ಘ ಸರ್ಗ.

ವೇದಾಂಗವಾದ ಜ್ಯೋತಿಶ್ಶಾಸ್ತ್ರ ಸಂಹಿತೋಕ್ತ

ಶ್ರೌತ ಸ್ಮಾರ್ತ ನಿತ್ಯ ನೈಮಿತ್ತಿಕ ಕರ್ಮಕಾಲಗಳನ್ನೂ,

ಫಲಗಳನ್ನೂ ತಿಳಿಸುವ ಬಹುಗ್ರಂಥಗಳಿಂದ

ಸಂಗ್ರಹಿಸಲ್ಪಟ್ಟ

# ಮುಹೂರ್ತ ದೀಪಿಕಾ,
# ಮುಹೂರ್ತದರ್ಪಣಗಳು.

ಬಾ. ತಿರುಮಲಾಚಾರ್ಯರಿಂದ,

ಕನ್ನಡದಲ್ಲಿ ಟೀಕಿಸಿ ಕೊಡಲ್ಪಟ್ಟು,

ಸೂರಂ. ಶಿವರಾಮಯ್ಯನವರಿಗಾಗಿ,

೩ನೇ ಛಾಪೆ ೧೦೦೦ ಪ್ರತಿಗಳು

ಬೆಂಗಳೂರು.

ಬೂದುಗುಪ್ಪೆ-ನಾರಾಯಣಯ್ಯರವರ

ಸತ್ಸಂಪ್ರದಾಯಕಳಾನಿಧಿ ಮುದ್ರಾಕ್ಷರಶಾಲೆಯಲ್ಲಿ

ಮುದ್ರಿಸಲ್ಪಟ್ಟಿತು.

೧೮೯೦

# ದೀಪಿಕೆಯ ವಿಷಯಾನುಕ್ರಮಣಿಕೆ.

ಇತಿ ವಿಷಯಾನುಕ್ರಮಣಿಕೆ ಸಂಪೂರ್ಣವಾದುದು.-



ಶ್ರೀರಸ್ತು.

# ಮುಹೂರ್ತ ದೀಪಿಕಾ.

---

ಜಯತ್ಯುದ್ದಂಡದೋರ್ದಂಡ ಖಂಡಿತಾರಾತಿಮಂಡಲಃ।
ಅಪಾರಮಹಿಮಾಸೋಯಂಜನಾನಂದವರ್ಧನಃ॥

## ನಕ್ಷತ್ರ ನಿಘಂಟು.

ಶ್ಲೋ॥ ಯಃಕರ್ತಾಜಗತಾಂಭರ್ತಾಸಂಹರ್ತಾಮಹಸಾನ್ನಿಧಿಃ।
ಪ್ರಣಮಾಮಿತಮಾದಿತ್ಯಂಬಹಿರಂತಸ್ತಮೋಪಹಂ॥

ಟೀ॥ ಯಾವನು ಲೋಕಗಳಿಗೆ ಕರ್ತನೊ, ರಕ್ಷಕನೋ, ಸಂಹಾರವನ್ನು ಮಾಡುವವನೋ, ತೇಜಸ್ಸುಗಳಿಗೆ ಮುಖ್ಯ ಸ್ಥಾನವಾಗಿ ಇದ್ದನೋ, ಒಳಗೆ ತಮೋ ಗುಣವನ್ನು ಹೊರಗೆ ಅಂಧಕಾರವನ್ನು ಸಹ ಹಂಸುವನೋ ಅಂಥಾ ಆದಿತ್ಯನನ್ನು ನಾನು ವಂದಿಸುತ್ತೇನೆಂದು ಶ್ಲೋಕಾರ್ಥವು.

ಶ್ಲೋ॥ ಭವತ್ಯಶ್ವಿನಿನಕ್ಷತ್ರಂ ಅಶ್ವೀದಸ್ರಸ್ತುರಂಗಮಃ।
ಆದ್ಯಸ್ತುರಂಗಸ್ತುರಗಃ ಅಶ್ವೋವಾಜೀಹಯೋಹರಿಃ॥

ಟೀ॥ ಅಶ್ವಿ, ದಸ್ರಃ, ತುರಂಗಮಃ, ಆದ್ಯಃ, ತುರಂಗಃ, ತುರಗಃ, ಅಶ್ವಃ, ವಾಜೀ, ಹಯಃ, ಹರಿಃ, ಈ ೧೦ ಶಬ್ದಗಳು ಅಶ್ವಿನೀ ನಕ್ಷತ್ರದ ಹೆಸರು.

ಶ್ಲೋ॥ ಭರಣೀಸ್ಯಾದ್ಯಮೋಯಾಮ್ಯಸ್ತ್ವಂತಕೋಯಮಸಂಜ್ಞಿಕಃ॥

ಟೀ॥ ಯಮಃ, ಯಾಮ್ಯಃ, ಅಂತಕಃ, ಯಮಸಂಜ್ಞಿಕಃ, ಈ ೪ ಶಬ್ದಗಳು ಭರಣೀ ನಕ್ಷತ್ರದ ಹೆಸರುಗಳು.

ಶ್ಲೋ॥ ಕೃತ್ತಿಕಾಬಹುಳಾಜ್ಞೇಯಾ ಹುತಭುಗ್ವಹ್ನಿಸಂಜ್ಞಿಕಾ।
ಷಟ್ತಾರಕೋಪಾವಕಶ್ಚಾನಲೋಥಜ್ವಲನಸ್ತಥಾ॥

ಟೀ॥ ಕೃತ್ತಿಕಾ, ಬಹುಳಾ, ಹುತಭುಕ್, ವಹ್ನಿಸಂಜ್ಞಿಕಾ, ಷಟ್ತಾರಕಃ, ಪಾವಕಃ, ಅನಲಃ, ಜ್ವಲನಃ, ಈ ೮ ಶಬ್ದಗಳು ಕೃತ್ತಿಕಾನಕ್ಷತ್ರದ ಹೆಸರುಗಳು.

ಶ್ಲೋ॥ ರೋಹಿಣೀಚವಿಧಿರ್ಬ್ರಹ್ಮಾ ಪ್ರಾಜಾಪತ್ಯಶ್ಚತುರ್ಮುಖಃ।
ಪ್ರಜಾಪತಿಃಪ್ರಜೇಶಶ್ಚ ವಿಧಾತಾಪಂಕಜಾಸನಃ।
ಆತ್ಮಭೂಃಪದ್ಮಯೋನಿಸ್ಸ್ಯಾದ್ಬ್ರಹ್ಮನಾಮತತಃಪರಂ॥

ಟೀ॥ ರೋಹಿಣೀ, ವಿಧಿಃ, ಬ್ರಹ್ಮಾ, ಪ್ರಾಜಾಪತ್ಯಃ, ಪದ್ಮಜಃ, ಪ್ರಜಾಪತಿಃ, ಪ್ರಜೇಶಃ, ವಿಧಾತಾ, ಪಂಕಜಾಸನಃ ಆತ್ಮಭೂಃ, ಪದ್ಮಯೋನಿಃ, ಬ್ರಹ್ಮನಾಮ, ಈ ೧೨ ಶಬ್ದಗಳು ರೋಹಿಣೀ ನಕ್ಷತ್ರದ ಹೆಸರುಗಳು.

ಶ್ಲೋ॥ ಮೃಗಶೀರ್ಷಮ್ಮೃಗಶ್ಚಂದ್ರ ಐಂದವಂ ಹಿಮದೀಧಿತಿಃ।
ಸ್ಯಾಚ್ಚಂದ್ರಶಶಿಭಂಸೌಮ್ಯಂನಿಶಾನಾಥೋನಿಶಾಕರಃ॥

ಟೀ ॥ ಮೃಗಶೀರ್ಷ, ಮೃಗಃ, ಚಾಂದ್ರಃ, ಐಂದವಃ, ಹಿಮದೀಧಿತಿಃ, ಚಾಂದ್ರೀ, ಶಶಿಭಂ, ಸೌಮ್ಯಃ, ನಿಶಾನಾಥಃ, ನಿಶಾಕರಃ, ಈ ೮ ಶಬ್ದಗಳು ಮೃಗಶಿರ ನಕ್ಷತ್ರದಲ್ಲಿ ವರ್ತಿಸುವವು.

ಶ್ಲೋ ॥ ಆರ್ದ್ರಾರೌದ್ರೀಚಶೂಲಜಿಚ್ಛರ್ವಸ್ಥಾಣುರ್ಭವೋಹರಃ ॥

ಟೀ ॥ ಆರ್ದ್ರಾ, ಶೂಲಜಿತ್, ಶರ್ವಃ, ಸ್ಥಾಣುಃ, ಭವಃ, ಹರಃ, ಈ ೬ ಶಬ್ದಗಳು ಆರ್ದ್ರಾ ನಕ್ಷತ್ರದ ಹೆಸರುಗಳು.

ಶ್ಲೋ ॥ ಪುನರ್ವಸ್ಸ್ವದಿತಿರ್ದೇವಮಾತಾಆದಿತ್ಯಮೇವಚ ॥

ಟೀ ॥ ಪುನರ್ವಸು, ಅದಿತಿಃ, ದೇವಮಾತಾ, ಆದಿತ್ಯಂ, ಈ ೪ ಶಬ್ದಗಳು ಪುನರ್ವಸು ನಕ್ಷತ್ರದ ನಾಮಗಳು

ಶ್ಲೋ ॥ ಇಜ್ಯಾರ್ಕ್ಯಾತಿಷ್ಯಪುಷ್ಯೌತುಪೂಜಿತೋಗುರುನಾಮಕಃ। ವಾ
ಗೀಶಶ್ಚಾಮರೇಜ್ಯಶ್ಚಜೀವೋದೇವಪುರೋಹಿತಃ ॥

ಟೀ ॥ ಇಜ್ಯಃ, ಅರ್ಕ್ಯಃ, ತಿಷ್ಯಃ, ಪುಷ್ಯಃ, ಪೂಜಿತಃ, ಗುರುನಾಮಕಃ, ವಾಗೀಶಃ, ಅಮರೇಜ್ಯಃ, ಜೀವಃ, ದೇವಪುರೋಹಿತಃ ಈ ೧೦ ಶಬ್ದಗಳು ಪುಷ್ಯ ನಕ್ಷತ್ರದ ಹೆಸರುಗಳು

ಶ್ಲೋ ॥ ಆಶ್ಲೇಷೋರಗಸಾರ್ಪಾಹಿಭುಜಂಗವ್ಯಾಳಸಂಜ್ಞಿಕಃ ॥

ಟೀ ॥ ಆಶ್ಲೇಷಃ, ಉರಗಃ, ಸಾರ್ಪಃ, ಅಹಿಃ, ಭುಜಗಃ, ವ್ಯಾಳಸಂಜ್ಞಿಕಃ, ಈ ೬ ಶಬ್ದಗಳು ಆಶ್ಲೇಷಾ ನಕ್ಷತ್ರದ ಹೆಸರುಗಳು.

ಶ್ಲೋ ॥ ಮಖಾಪಿತಾಪೈತ್ರ್ಯಶ್ಚಮೇಖಲಾಪಿತೃಭಂತಥಾ॥

ಟೀ ॥ ಮಖಾ, ಪಿತಾ, ಪೈತ್ರೀ, ಮೇಖಲಾ, ಪಿತೃಭಂ, ಈ ೫ ಶಬ್ದಗಳು ಮಖಾನಕ್ಷತ್ರದ ನಾಮಗಳು

ಶ್ಲೋ ॥ ಭಾಗ್ಯಂಪೂರ್ವಾಫಲ್ಗುನೀಶ್ಚೈವಭಗಾಖ್ಯಂಭಗಸಂಜ್ಞಿಕಂ॥

ಟೀ ॥ ಭಾಗ್ಯಂ, ಪೂರ್ವಫಲ್ಗುನೀ, ಭಗಾಖ್ಯಂ, ಭಗಸಂಜ್ಞಿಕಂ, ಈ ೪ ಶಬ್ದಗಳು ಪೂರ್ವಫಲ್ಗುನೀ ನಕ್ಷತ್ರದ ಹೆಸರುಗಳು.

ಶ್ಲೋ ॥ ಅರ್ಯಮರ್ಯಮಣಂಚೈವಅರ್ಯಮ್ಣಂಚೋತ್ತರಂತಥಾ ॥

ಟೀ ॥ ಅರ್ಯಮಾ, ಅರ್ಯಮಣಂ, ಅರ್ಯಮ್ಣಂ, ಉತ್ತರಂ, ಈ ೪ ಶಬ್ದಗಳು ಉತ್ತರಫಲ್ಗುನೀ ನಕ್ಷತ್ರದ ಹೆಸರುಗಳು.

ಶ್ಲೋ ॥ ಹಸ್ತಸ್ಸವಿತೃಸಾವಿತ್ರಅರ್ಕಸ್ಸೂರ್ಯೋದಿವಾಕರಃ ॥

ಟೀ ॥ ಹಸ್ತಃ, ಸವಿತಾ, ಸಾವಿತ್ರಃ, ಅರ್ಕಃ, ಸೂರ್ಯಃ, ದಿವಾಕರಃ, ಈ ೬ ಶಬ್ದಗಳು ಹಸ್ತನಕ್ಷತ್ರದ ಹೆಸರುಗಳು

ಶ್ಲೋ ॥ ಚಿತ್ರಾಸ್ತ್ವಾಷ್ಟ್ರದೈವತ್ಯಂತ್ವಾಷ್ಟ್ರೈಂದ್ರಸುರವರ್ಧಕಂ॥

ಟೀ॥ ಚಿತ್ರಾ, ತ್ವಷ್ಟೃದೈವತ್ಯಂ, ತ್ವಾಷ್ಟ್ರಃ, ಐಂದ್ರಃ, ಸುರವರ್ಧಕಂ, ಈ

೪ ಶಬ್ದಗಳು ಚಿತ್ರಾನಕ್ಷತ್ರದ ಹೆಸರುಗಳಾಗುವವು

ಶ್ಲೋ॥ ಸ್ವಾತೀಸಮೀರಣೋವಾಯುಃ ಪವನಶ್ಚಾನಿಲೋಮರುತ್॥

ಟೀ॥ ಸ್ವಾತಿಃ, ಸಮೀರಣಃ, ವಾಯುಃ, ಪವನಃ, ಅನಿಲಃ, ಮರುತ್ ಈ ೬ ಶಬ್ದಗಳು ಸ್ವಾತೀನಕ್ಷತ್ರದಹೆಸರುಗಳು

ಶ್ಲೋ॥ ವಿಶಾಖಾಪೂರ್ವಮಿಂದ್ರಾಗ್ನಿಂದ್ವಿದೈವತ್ಯಂವಿಶಾಖಿಕಾಂ॥

ಟೀ॥ ವಿಶಾಖಾ, ಪೂರ್ವಂ, ಇಂದ್ರಾಗ್ನಿಂ, ದ್ವಿದೈವತ್ಯಂ, ವಿಶಾಖಿಕಂ ಈ ೫ ಶಬ್ದಗಳು ವಿಶಾಖಾನಕ್ಷತ್ರದಹೆಸರುಗಳು

ಶ್ಲೋ॥ ಮಿತ್ರಂವೈತ್ರಮನೂರಾಧ ಮನೂರಾಧ್ಯಸಂಜ್ಞಿತಂ॥

ಟೀ॥ ಮಿತ್ರಂ, ವೈತ್ರಂ, ಅನೂರಾಧಾ, ಈ ೩ ಶಬ್ದಗಳು ಅನೂರಾಧಾನಕ್ಷತ್ರದನಾಮಗಳು.

ಶ್ಲೋ॥ ಜ್ಯೇಷ್ಠೇಂದ್ರೋಪುರುಹೂತರ್ಕ್ಷ್ಯ ಇಂದ್ರಶ್ಶತಮುಖಸ್ತಥಾ॥

ಟೀ॥ ಜ್ಯೇಷ್ಠಾ, ಇಂದ್ರಃ, ಪುರುಹೂತಃ, ಇಂದ್ರಃ, ಶತಮುಖಃ, ಈ ೪ ಶಬ್ದಗಳು ಜ್ಯೇಷ್ಠಾನಕ್ಷತ್ರದಹೆಸರುಗಳು.

ಶ್ಲೋ॥ ಮೂಲಂನಿಶಾಚರಂಪ್ರೋಕ್ತ ಮಸುರಂ ನಿರ್ಋತಿಂ ತಥಾ।
ನಕ್ತಂಚರಂಕೌಣಪಂಚರಾಕ್ಷಸಂಪಿಶಿತಾಶನಂ॥

ಟೀ॥ ಮೂಲಂ, ನಿಶಾಚರಂ, ಅಸುರಂ, ನಿರ್ಋತಿಂ, ನಕ್ತಂಚರಂ, ಕೌಣಪಂ, ರಾಕ್ಷಸಂ, ಪಿಶಿತಾಶನಂ ಈ ೮ ಶಬ್ದಗಳು ಮೂಲಾನಕ್ಷತ್ರದಹೆಸರುಗಳನ್ನಿಸಿಕೊಳ್ಳುತ್ತವೆ.

ಶ್ಲೋ॥ ಪೂರ್ವಾಷಾಢಾಜಲಂತೋಯಮುದಕಂ ಚಾಪಯೇವಚ॥

ಟೀ॥ ಪೂರ್ವಾಷಾಢಾ, ಜಲಂ, ತೋಯಂ, ಉದಕಂ, ಅಪಃ, ಈ ೫ ಶಬ್ದಗಳು ಪೂರ್ವಾಷಾಢಾನಕ್ಷತ್ರದ ಹೆಸರುಗಳು.

ಶ್ಲೋ॥ ಉತ್ತರಾಷಾಢವಿಶ್ವಂಚ ಅಭಿಜಿದ್ವಾಪ್ರಕಾಶಕಂ॥

ಟೀ॥ ಉತ್ತರಾಷಾಢ, ವಿಶ್ವಂ, ಈ ೨ ಶಬ್ದಗಳು ಉತ್ತರಾಷಾಢಾ ನಕ್ಷತ್ರದಹೆಸರುಗಳು. ಅಭಿಜಿತ್, ಅಪ್ರಕಾಶಕಂ, ಈ ೨ ಶಬ್ದಗಳು ಅಭಿಜಿನ್ನಕ್ಷತ್ರದ ಹೆಸರುಗಳು.

ಶ್ಲೋ॥ ಶ್ರವಣಂವೈಷ್ಣವಂಶ್ರೀಶಂ ಶ್ರೀಕಾಂತಮುರಜಿದ್ಧನಂ॥

ಟೀ॥ ಶ್ರವಣಂ, ವೈಷ್ಣವಂ, ಶ್ರೀಕಾಂತಂ, ಮುರಜಿತ್, ಧನಂ ಈ ೫ ಶಬ್ದಗಳು ಶ್ರವಣ ನಕ್ಷತ್ರದ ಹೆಸರು ಗಳು.

ಶ್ಲೋ॥ ಶ್ರವಿಷ್ಠಾಚ ಧನಿಷ್ಠಾಚ ವಸುರ್ವಾಸವವೇಚ।

ಟೀ॥ ಶ್ರವಿಷ್ಠಾ, ಧನಿಷ್ಠಾ, ವಸುಃ, ವಾಸವಃ ಈ ೪ ಶಬ್ದಗಳು ಧನಿಷ್ಠಾನಕ್ಷತ್ರದ ಹೆಸರುಗಳು.

ಶ್ಲೋ॥ ಪ್ರಾಚೇತಸೋಜಲನಿಧಿಶ್ಶತತಾರಶ್ಚ ವಾರುಣಾಃ॥

ಟೀ॥ ಪ್ರಾಚೇತಸಃ, ಜಲನಿಧಿಃ, ಶತತಾರಂ, ವಾರುಣಾಃ, ಈ ೪ ಶಬ್ದಗಳು ಶತಭಿಷಕ್ ನಕ್ಷತ್ರದಹೆಸರುಗಳು

ಶ್ಲೋ॥ ಅಜೈಕಪಾತ್ಪ್ರೋಷ್ಠಪದಾ ಪೂರ್ವಾಭಾದ್ರಪದಾತಥಾ॥

ಟೀ॥ ಅಜೈಕಪಾತ್, ಪ್ರೋಷ್ಠಪದಾ, ಪೂರ್ವಾಭಾದ್ರಪದಾಈ ೪ ನ್ನೂ ಪೂರ್ವಾಭಾದ್ರಾನಕ್ಷತ್ರದ ನಾಮಗಳು.

ಶ್ಲೋ॥ ಉತ್ತರಾಭಾದ್ರಕಂಚೈವ ಅಹಿರ್ಬುಧ್ನಿ ನಿಶಾಮುಖಂ॥

ಟೀ॥ ಉತ್ತರಾಭಾದ್ರಕಂ, ಅಹಿರ್ಬುಧ್ನ್ಯಂ, ನಿಶಾಮುಖಂ, ಈ ೩ ನ್ನೂ ಉತ್ತರಾಭಾದ್ರಾನಕ್ಷತ್ರದನಾಮಗಳು

ಶ್ಲೋ॥ ರೇವತೀಪೌಷ್ಣ ಇತ್ಯಾಹು ರಂತ್ಯಃಪೂಷಾತಥೈವಚ॥

ಟೀ॥ ರೇವತೀ, ಪೌಷ್ಣಃ, ಅಂತ್ಯಃ, ಪೂಷಾ, ಈ ೪ ನ್ನೂ ರೇವತೀ ನಕ್ಷತ್ರದಹೆಸರುಗಳು

ನಕ್ಷತ್ರನಿಘಂಟು ಸಂಪೂರ್ಣವು

———o———

## ರಾ ಸಿ ನಿ ಘಂ ಟು.

ಶ್ಲೋ॥ ಅಜಾಕ್ರಿಯಾಛಾಗಬಸ್ತಾ ತೂಬರಾವಿಶ್ವಭೇಷಜೀ।
ಮೇಷಚಾದ್ಯಾಕ್ರಿಯಾಬಸ್ತಾ ಛಾಗೀವಾಗಿರಯಸ್ತಥಾ॥

ಟೀ॥ ಅಜ, ಕ್ರಿಯಃ, ಛಾಗಃ, ಬಸ್ತಾ, ತೂಬರಃ, ವಿಶ್ವ, ಭೇಷಜೀ, ಮೇಷಃ, ಆದ್ಯಃ, ಕ್ರಿಯಃ, ಛಾಗೀ, ವಾಗಿ, ಅಯಃ, ಈ ೧೧ ಶಬ್ದಗಳು ಮೇಷರಾಶಿಯ ಹೆಸರುಗಳು.

ಶ್ಲೋ॥ ವೃಷಭಸ್ತಾ ಉರುಗೌಶ್ಚವೃಷಉಕ್ಷಾತಥೈವಚ।
ಅನಡ್ವಾನ್ಸೌರಭೇಯಶ್ಚದೂರಕ್ಷೋಭೀವೃಷಾಹ್ವಯಃ॥

ಟೀ॥ ವೃಷಭಃ, ತಾವುರುಃ, ಗೌಃ, ವೃಷಃ, ಉಕ್ಷಾ, ಅನಡ್ವಾನ್, ಸೌರಭೇಯಃ, ದೂರಕ್ಷೋಭೀ, ಈ೮ ನ್ನೂ ವೃಷಭರಾಸಿಯಹೆಸರುಗಳು.

ಶ್ಲೋ॥ ಮಿಥುನಂಯಮಳಂಯುಗ್ಮಂನೃಯುಗ್ಮಂಚಯುಗಂತಥಾ।

ಟೀ॥ ಮಿಥುನಂ, ಯಮಳಂ, ಯುಗ್ಮಂ, ನೃಯುಗ್ಮಂ, ಯುಗಂ, ಈ೫ ನ್ನೂ ಮಿಥುನರಾಶಿಯಹೆಸರುಗಳು.

ಶ್ಲೋ॥ ಕುಳೀರಕರ್ಕೀಕಟಕಃಕರ್ಕಿಣೀನಿಚಳೀಝುಮಾನ್॥

ಟೀ॥ ಕುಳೀರಃ, ಕರ್ಕೀಃ ಕಟಕಃ, ಕರ್ಕಿಣೀ, ನಿಚಳೀ, ಝುಮಾನ್ ಈ ೬ ನ್ನೂ ಕಟಕರಾಶಿಯನಾಮಗಳು.

ಶ್ಲೋ॥ ಸಿಂಹೋಮೃಗಾರಿರ್ಮೃಗರಾಟ್ಮೃಗೇಂದ್ರೋಮೃಗನಾಯಕಃ॥

ಹರಿಃಪಂಚಾನನೋರಾಜಾಲೆಯಿಃಕೇಸರೀರವಸ್ತಥಾ॥

ಟೀ॥ ಸಿಂಹಃ, ಮೃಗಾರಿಃ, ಮೃಗರಾಟ್, ಮೃಗೇಂದ್ರಃ, ಮೃಗನಾಯಕಃ, ಹರಿಃ, ಪಂಚಾನನಃ, ರಾಜಾ, ಲೆಯಃ, ಕೇಸರೀರವಃ, ಈ ೧೦ ಶಬ್ದಗಳು ಸಿಹ್ಮರಾಶಿಯ ಹೆಸರುಗಳು.

ಶ್ಲೋ॥ ಅಂಗನಾಸ್ತ್ರೀವಧೂಃಕನ್ಯಾಪಾರ್ಥೆಯಂಕನ್ಯಕಾಬಲೆ॥

ಟೀ॥ ಅಂಗನಾ-ಸ್ತ್ರೀ, ವಧೂಃ, ಕನ್ಯಾ, ಪಾರ್ಥಾ, ಕನ್ಯಕಾ, ಅಬಲಾ, ಈ ೭ ನ್ನೂ ಕನ್ಯಾರಾಸಿಯಹೆಸರುಗಳು.

ಶ್ಲೋ॥ತುಲಾತೌಳಿವಣಿಗ್ಜೂಕಃತುಲಾಭೃದ್ಧಟಸಂಜ್ಞಿಕಃ॥

ಟೀ॥ ತುಲಾ, ತೌಳೀ, ವಣಿಕ್, ಜೂಕಃ, ತುಲಾಭೃತ್, ಧಟ ಈ೬ನ್ನೂ ತುಲಾರಾಸಿಯ ನಾಮಗಳು.

ಶ್ಲೋ॥ ಅಳಿಸ್ಸರೀಸೃಪಃಕೌರ್ಪೀಕೀಟೋವೃಶ್ಚಿಕವಾಚಕಃ॥

ಟೀ॥ ಅಳಿಃ, ಸರೀಸೃಪಃ, ಕೌರ್ಪಿಃ, ಕೀಟಃ,ಈ ೪ ಶಬ್ದಗಳು ವೃಶ್ಚಿಕ ರಾಸಿಯ ಹೆಸರುಗಳು.

ಶ್ಲೋ॥ ಶಾರ್ಙ್ಗಂಶರಾಸನಂಪ್ರೋಕ್ತಂ ತೌಕ್ರಿಕಂ ಮಾರ್ಗಣಾಸನಂ।
ಚಾಪಂತೂಣೀರಬಾಣಂಚಧನುಃಕೋದಂಡ ಕಾರ್ಮುಕಮ್॥

ಟೀ॥ಶಾರ್ಙ್ಗಂ, ಶರಾಸನಂ, ತೌಕ್ರಿಕಂ, ಮಾರ್ಗಣಾಸನಂ, ಚಾಪಂ, ತೂಣೀರಂ, ಬಾಣಃ, ಧನುಃ,ಕೋದಂಡಂ, ಕಾರ್ಮುಕಂ ಈ ೧೦ ಶಬ್ದಗಳುಧನೂರಾಸಿಯ ಹೆಸರುಗಳು.

ಶ್ಲೋ॥ ಮಕರಸ್ಯಾನ್ಮೃಗೋನಕ್ರಶ್ಚಾಕೋಕೇಕಶ್ಚಕಥ್ಯತೆ॥

ಟೀ॥ಮಕರಃ, ಮೃಗಃ, ಆಕೋಕೇಕಃ, ಈ ೩ ನ್ನೂ ಮಕರರಾಸಿಯ ಹೆಸರುಗಳು.

ಶ್ಲೋ॥ ಕುಂಭೋಘಟೋಜಲಧರೋಹೃದ್ರೋಗಇತಿಕೀರ್ತಿತಾಃ॥

ಟೀ॥ ಕುಂಭಃ, ಘಟಃ, ಜಲಧರಃ, ಹೃದ್ರೋಗಃ, ಈ ೪ ನ್ನೂ ಕುಂಭ ರಾಸಿಯ ಹೆಸರುಗಳು.

ಶ್ಲೋ॥ಮೀನಾಂತ್ಯೋನಿಮಿಷೋಮತ್ಸ್ಯಝಷಶ್ಚಾವಾರಿಜೋಂಡಜಃ।
ಜಲಜೋಪೃಥುರೋಮಾಚಮೀನಸಂಜ್ಞಾಪ್ರಕೀರ್ತಿತಾಃ॥

ಟೀ॥ಮೀನಃ,ಅಂತ್ಯಃ, ಅನಿಮಿಷಃ, ಮತ್ಸ್ಯಃ,ಝಷಃ, ವಾರಿಜಃ, ಅಂಡಜಃ,ಜಲಜಃ, ಪೃಥುರೋಮಾ, ಈ ೯ಶಬ್ದಗಳುಮೀನರಾಸಿಯ ಹೆಸರುಗಳು.

ರಾಸಿ ನಿಘಂಟು ಸಂಪೂರ್ಣವು.

ಗ್ರಹಸಂಜ್ಞಾಪ್ರಕರಣಂಭವು.

ಶ್ಲೋ॥ಆದಿತ್ಯೋsರ್ಕಾರವಿರ್ಭಾನುರ್ಭಾಸ್ಕರಶ್ಚ ದಿವಾಕರಃ।
ಮಾರ್ತಾಂಡಸ್ಸವಿತಾಹೇಳಿಃಶೀತ್ಪ್ಣಾಂಶುರ್ಮಿಹಿರೋರವಿಃ॥

ಟೀ॥ ಆದಿತ್ಯಃ, ಅರ್ಕಃ, ರವಿಃ, ಭಾನುಃ, ಭಾಸ್ಕರಃ, ದಿವಾಕರಃ, ಮಾರ್ತಾಂಡಃ, ಸವಿತಾ, ಹೇಳಿಃ, ಶೀಷ್ಣಾಂಶುಃ, ಮಿಹಿರಃ, ಈ ೧೧. ನ್ನೂ ಸೂರ್ಯಗ್ರಹದ ಹೆಸರುಗಳು.

ಶ್ಲೋ॥ ಚಂದ್ರಃ ಕ್ಷಿಶಶಾಂಕಶ್ಚ ವಿಧುಸ್ಸೋಮೋ ನಿಶಾಕರಃ।
ಶೀತಾಂಶುರುಡುನಾಥಶ್ಚ ಇಂದುಃಶ್ಚಂದ್ರಮುಸೋವಿಧುಃ॥

ಟೀ॥ಚಂದ್ರಃ, ಶಶೀ, ಶಶಾಂಕಃ, ವಿಧುಃ, ಸೋಮಃ, ನಿಶಾಕರಃ, ಶೀತಾಂಶುಃ, ಉಡುನಾಥಃ, ಇಂದುಃ, ಈ ಶಬ್ದಗಳು ಚಂದ್ರಗ್ರಹದ ನಾಮಗಳು.

ಶ್ಲೋ॥ ಆರೋವಕ್ರೋಮಹೀಜಶ್ಚ ರುಧಿರೋರಕ್ತಯೇವಚ।
ಅಂಗಾರಕಃಕುಜೋಭೌಮೋಲೋಹಿತಾಂಗೋಮಹೀಸುತಃ।

ಟೀ॥ಆರಃ, ವಕ್ರಃ, ಮಹೀಜಃ, ರುಧಿರಃ, ರಕ್ತಃ, ಅಂಗಾರಕಃ, ಕುಜಃ ಭೌಮಃ, ಲೋಹಿತಾಂಗಃ, ಮಹೀಸುತಃ, ಮತ್ತು ಕ್ರೂರದೃಕ್, ಅವನೇಯಃ, ಈ ೧೨ ನ್ನೂ ಕುಜಗ್ರಹದಹೆಸರುಗಳು.

ಶ್ಲೋ॥ ಸೌಮ್ಯೋವಿಡ್ಜ್ಞೋಬುಧೋಹೇಮಸ್ಸೋಮಜೋಬೋಧನಃಕ್ರಮಾತ್॥

ಟೀ॥ಸೌಮ್ಯಃ, ವಿಟ್, ಜ್ಞಃ, ಬುಧಃ, ಹೇಮಃ, ಸೋಮಜಃ, ಬೋಧನಃ, ಈ ೭ ನ್ನೂ ಬುಧಗ್ರಹದಹೆಸರುಗಳು.

ಶ್ಲೋ॥ ಜೀವಆಂಗೀರಸೋವಾಚಸ್ಪತಿಶ್ಚಿತ್ರಶಿಖಂಡಿಜಃ।
ಆರ್ಯೋಬೃಹಸ್ಪತಿಸ್ಸೂರಿರ್ವಾಗೀಶೋವಚಸಾಂಪತಿಃ।

ಟೀ॥ಜೀವಃ, ಆಂಗೀರಸಃ, ವಾಚಸ್ಪತಿಃ, ಚಿತ್ರಶಿಖಂಡಿಜಃ, ಆರ್ಯಃ, ಬೃಹಸ್ಪತಿಃ, ಸೂರಿಃ, ವಾಗೀಶಃ, ವಚಸಾಂಪತಿಃ, ಈ ೯ ಶಬ್ದಗಳು ಬೃಹಸ್ಪತಿಯಹೆಸರುಗಳು.

ಶ್ಲೋ॥ಶುಕ್ರೋಭೃಗುರ್ಭೃಗುಸುತಸ್ತ್ವಚ್ಛಜಸ್ಸಿತಶ್ಚಸಃ।
ಉಶನಾದೈತ್ಯಪೂಜ್ಯಶ್ಚ ಕಾವ್ಯಃಕವಿರಿತಿಸ್ಮೃತಃ॥

ಟೀ॥ಶುಕ್ರಃ, ಭೃಗುಃ, ಭೃಗುಸುತಃ, ಅಚ್ಛಜಃ, ಸಿತಃ, ಉಶನಾಃ, ದೈತ್ಯಪೂಜ್ಯಃ, ಕಾವ್ಯಃ, ಕವಿಃ, ಈ ಶಬ್ದಗಳು ನ್ನೂ ಶುಕ್ರಗ್ರಹದಹೆಸರುಗಳು.

ಮೂ॥ಕೋಣೋಮಂದಶ್ಶನಿಃಕೃಷ್ಣಸ್ಸೂರ್ಯಪುತ್ರೋಯಮಶ್ಚಸಃ।
ಪಂಗುಶ್ಚಸೈಶ್ಚರಸ್ಸೌರಃಕಾಲಛಾಯಾಸುತಶ್ಚಸಃ॥

ಟೀ॥ಕೋಣಃ, ಮಂದಃ, ಶನಿಃ, ಕೃಷ್ಣಃ, ಸೂರ್ಯಪುತ್ರಃ, ಯಮಃ, ಪಂಗುಃ, ಶನೈಶ್ಚರಃ, ಸೌರಿಃ, ಕಾಲಃ, ಛಾಯಾಸುತಃ, ಈ ೧೧ ನ್ನೂ ಶನಿಗ್ರಹದನಾಮಗಳು

ಶ್ಲೋ ॥ ರಾಹುಸ್ತಮಸ್ಸುರೋಗಶ್ಚ ಸ್ವರ್ಭಾನುಶ್ಚನಿಧುಂತುದಃ ।
ಪಾತುಶ್ಚಸ್ಸೈಂಹಿಕೇಯಶ್ಚ ಭುಜಗಾಖ್ಯಇತಿಸ್ಮೃತಃ ।

ಟೀ॥ ರಾಹುಃ, ತಮಃ, ಸುರೋಗಃ, ಸ್ವರ್ಭಾನುಃ, ವಿಧುಂತುದಃ, ಪಾತುಃ, ಸ್ಸೈಂಹಿಕೇಯಃ, ಭುಜಗಾಖ್ಯಃ, ಈ ೮ನ್ನೂ ರಾಹುಗ್ರಹದ ಹೆಸರುಗಳು

ಶ್ಲೋ ॥ ಕೇತುಶ್ಶಿಖೀಧ್ವಜೋಧೂಮ್ರ ಉತ್ಪಾತೋಬಹುರೂಪಕೃತ್ ।
ಶಿರೋಹೀನೋಘೋರರೂಪಶ್ಚಿತ್ರವರ್ಣಸ್ಸುಕೇತವಃ॥

ಟೀ॥ ಕೇತುಃ, ಶಿಖೀ, ಧ್ವಜಃ, ಧೂಮ್ರಃ, ಉತ್ಪಾತಃ, ಬಹುರೂಪಕೃತ್, ಶಿರೋಹೀನಃ, ಘೋರರೂಪಃ, ಚಿತ್ರವರ್ಣಃ, ಸುಕೇತುಃ, ಈ ೧೦ ಶಬ್ದಗಳು ಕೇತುಗ್ರಹದ ಹೆಸರುಗಳು.

ಗ್ರಹನಿಘಂಟು ಸಂಪೂರ್ಣವು

---

## ಅಥ ಸ್ಥಾನನಿಘಂಟು ಪ್ರಾರಂಭಃ.

ಶ್ಲೋ ॥ ಕ್ಷಿತೀಶೋಪ್ಯುದಯೋರಾಶಿರ್ಲಗ್ನಂಹೋರೋದಯಸ್ತನುಃ।
ಕಲ್ಯೋವಿಲಗ್ನಮಾತ್ಮಾಚಭಾವೋಯಂಪ್ರಥಮೋಭವೇತ್॥

ಟೀ॥ ಕ್ಷಿತೀಶಃ, ಉದಯಃ, ರಾಶಿಃ, ಲಗ್ನಂ, ಹೋರೋದಯಃ, ತನುಃ, ಕಲ್ಯಃ, ವಿಲಗ್ನಂ, ಆತ್ಮಾ, ಈ ೯ ಶಬ್ದಗಳು ಲಗ್ನಭಾವದ ಹೆಸರುಗಳು.

ಶ್ಲೋ ॥ ದ್ವಿತೀಯಂಧನವಾಗ್ವಿತ್ತಂಕುಟುಂಬಂನೇತ್ರಸಂಜ್ಞಿಕಂ॥

ಟೀ॥ ದ್ವಿತೀಯಂ, ಧನಂ, ವಾಕ್, ವಿತ್ತಂ, ಕುಟುಂಬಂ, ನೇತ್ರಸಂಜ್ಞಿಕಂ ಈ ೬ನ್ನೂ ದ್ವಿತೀಯಭಾವದ ಹೆಸರುಗಳು.

ಶ್ಲೋ ॥ ತೃತೀಯಂವಿಕ್ರಮುಭ್ರಾತೃದುಶ್ಚಿಕ್ಯಂಸಹಜಸ್ತಥಾ॥

ಟೀ॥ ತೃತೀಯಂ, ವಿಕ್ರಮಃ, ಸಹಜಃ, ಭ್ರಾತಾ, ದುಶ್ಚಿಕ್ಯಂ, ಈ ೫ ನ್ನೂ ತೃತೀಯಭಾವದ ಹೆಸರುಗಳು

ಶ್ಲೋ ॥ ಚತುರ್ಥಂಹಿಬುಕಂವೇಶ್ಮಬಂಧುರಬ್ಧಿಸುಖಂಜಲಂ ।
ಪಾತಾಳಂಜನನೀಮಾತೃಉದಕಂಚಪಯೋಮೃತಂ॥

ಟೀ॥ ಚತುರ್ಥಂ, ಹಿಬುಕಂ, ವೇಶ್ಮ, ಬಂಧುಃ, ಅಬ್ಧಿಃ, ಸುಖಂ, ಜಲಂ, ಪಾತಾಳಂ, ಜನನೀ, ಮಾತಾ, ಉದಕಂ, ಪಯಃ, ಈ ೧೨ನ್ನೂ ಚತುರ್ಥಭಾವದ ಹೆಸರುಗಳು.

ಶ್ಲೋ ॥ ಪಂಚಮಂತನಯೋಮಂತ್ರೀಹ್ಯಾತ್ಮಾಚಸುತಉಚ್ಯತೇ॥

ಟೀ॥ ಪಂಚಮಂ, ತನಯಃ, ಮಂತ್ರೀ, ಆತ್ಮಾ, ಸುತಃ, ಈ ೫ನ್ನೂ ಪಂಚಮ ಭಾವದಹೆಸರುಗಳು.

ಶ್ಲೋ ॥ ಷಷ್ಠಮಂರಿಪುರಿತ್ಯಾಹುಃಕ್ಷತಇತ್ಯಭಿಧೀಯತೇ ॥

ಟೀ॥ಷಷ್ಠಮಂ,ರಿಪು,ಮೃಣಂ,ಕ್ಷತ,ಈಳನ್ನೂ ಷಷ್ಠಭಾವದಹೆಸರುಗಳು.

ಶ್ಲೋ॥ ಸಪ್ತಮಂದ್ಯೂನಮಸ್ತಂಚದ್ಯೂತಂಚಮದನಸ್ಸ್ಮರಃ ।
ಕಾಮೋವಿವಾಹೋಜಾಮಿತ್ರಂಭಾರ್ಯೇತಿವಿನಿದರ್ಶಿತಂ।

ಟೀ॥ ಸಪ್ತಮಂ, ದ್ಯೂನಂ, ಅಸ್ತಂ,ದ್ಯೂತಂ,ಮದನಃ,ಸ್ಮರಃ,ಕಾಮಃ, ವಿವಾಹಃ, ಜಾಮಿತ್ರಂ, ಭಾರ್ಯಾ, ಈ ೧೦ನ್ನೂ ಸಪ್ತಮಭಾವದಹೆಸರುಗಳು

ಶ್ಲೋ॥ ಅಷ್ಟಮಂನಿಧನಂರಂಧ್ರಂಪಾಪಮಾಯುರ್ಮೃತೀರುಜಾ ॥

ಟೀ॥ ಅಷ್ಟಮಂ, ನಿಧನಂ, ರಂಧ್ರಂ, ಪಾಪಂ, ಆಯುಃ,ಮೃತಿಃ,ರುಜಾ,ಈ ೭ನ್ನೂ, ಅಷ್ಟಮಭಾವದ ಹೆಸರುಗಳು.

ಮೂ॥ ನವಮಂಚತ್ರಿಕೋಣಂಚ ಸುಕೃತಂ ಗುರುಭಾಗ್ಯಕಂ।
ಪಿತೃಜ್ಞಾನೋದಯೋಭಕ್ತಿರ್ದೇವತೋಪಾಸನಸ್ತಥಾ॥

ಟೀ॥ ನವಮಂ, ತ್ರಿಕೋಣಂ, ಸುಕೃತಂ, ಗುರು, ಭಾಗ್ಯಂ, ಪಿತಾ, ಜ್ಞಾನೋದಯಃ, ಭಕ್ತಿಃ, ದೇವತೋಪಾಸನಂ, ಈ ೯ ನ್ನೂ ನವಮ ಭಾವದ ಹೆಸರುಗಳು.

ಮೂ॥ ದಶಮೋಮಾನಆಜ್ಞಾಪಿ ಕರ್ಮಸ್ಥಾನಮಿತಿಸ್ಮೃತಃ॥೭ ॥
ವೃದ್ಧಿಕರ್ಮಾಭಿಧಾನಂಚ ವಜ್ರೀಸಂಜ್ಞೆಯಉಚ್ಯತೇ॥

ಟೀ॥ ದಶಮಃ, ಮಾನಃ,ಆಜ್ಞಾ, ಕರ್ಮ, ಸ್ಥಾನಂ, ವೃದ್ಧಿಃ, ಕರ್ಮಾಭಿಧಾನಂ, ವಜ್ರೀ, ಸಂಜ್ಞೆಯ, ಈ ೯ ನ್ನೂ ದಶಮಭಾವದನಾಮಗಳು

ಮೂ॥ ಏಕಾದಶೋಭವೇಲಾಭಆಯುಶ್ಚವಿಜಯೀಶುಭಃ॥

ಟೀ॥ ಏಕಾದಶಃ, ಲಾಭಃ, ಆಯಃ, ವಿಜಯೀ,ಶುಭಃ, ಈ ೫ ನ್ನೂ ಏಕಾದಶ ಭಾವದ ನಾಮಗಳು.

ಮೂ॥ ದ್ವಾದಶಂಚವ್ಯಯಸ್ಥಾನಂ ಪಾಪಸ್ಥಾನಂಪ್ರಶಸ್ಯತೇ ॥

ಟೀ॥ ದ್ವಾದಶಂ, ವ್ಯಯಸ್ಥಾನಂ, ಪಾಪಸ್ಥಾನಂ, ಈ೩ ನ್ನೂ ದ್ವಾದಶ ಭಾವದ ಹೆಸರುಗಳು.

ಸ್ಥಾನನಿಘಂಟು ಸಂಪೂರ್ಣ.

---

## ಅಥ ಭಾವ ನಿಘಂಟು ಪ್ರಾರಂಭಃ.

ಮೂ॥ ಲಗ್ನಂಸ್ಯಾದುದಯೋರಾಶಿಃಕಲ್ಯಂಹೋರೋದಯಸ್ತನುಃ।
ಆದ್ಯೋದೇಹಶ್ಶರೀರಂಚ ವಿಲಗ್ನಾಧಾರಮೂರ್ತಯಃ॥೧॥
ಸ್ವಭಾವೋಜನ್ಮಚಾತ್ಮಾಚ ಭಾವೋಯಂಪ್ರಥಮಸ್ಮೃತಃ॥

ಟೀ॥ ಲಗ್ನಂ, ಉದಯಃ, ರಾಶಿಃ, ಕಲ್ಯಂ, ಹೋರಾ, ಉದಯಃ, ತನುಃ, ಆದ್ಯಃ, ದೇಹಃ, ಶರೀರಂ, ವಿಲಗ್ನಂ, ಆಧಾರಃ, ಮೂರ್ತಯಃ, ಸ್ವಭಾವಃ,

ಜನ್ಮ, ಆತ್ಮ, ಈ ೧೬ ಶಬ್ದಗಳು ಲಗ್ನಭಾವದ ಹೆಸರುಗಳು

ಮೂ॥ದ್ವಿತೀಯಂದ್ರವಿಣಂಸ್ವಾರ್ಥಃಕುಟುಂಬೋಧನವೇಶ್ಮಕಂ॥೨॥ಸತ್ಯವಾಚಿಕವಾಕ್ಸ್ಥಾನೆಯುಗ್ಮಂಕೋಶೋಹಿರಣ್ಯಕಂ।ಕರ್ಣಃಪ್ರಯಾಣನೇತ್ರಂಚಮುಖಂದಕ್ಷಿಣನೇತ್ರಕಂ॥೩॥ ಲೋಹಂಮುಕ್ತಾಫಲಂಸ್ವರ್ಣಂವಿದ್ಯಾಭುಕ್ತಿಸ್ತುಕಂಬಳಃ । ರತ್ನಂಧಾತುಶ್ಚವಿತ್ತಂ ಚಭಾವೋಯಂಚದ್ವಿತೀಯಕಃ॥

ಟೀ॥ದ್ವಿತೀಯಂ,ದ್ರವಿಣಂ, ಸ್ವಂ, ಅರ್ಥಃ, ಕುಟುಂಬಃ, ಧನವೇಶ್ಮ, ಸತ್ಯವಾಚಿಕಂ, ವಾಕ್ಸ್ಥಾನಂ, ಯುಗ್ಮಂ,ಕೋಶಃ, ಹಿರಣ್ಯಕಂ,ಕರ್ಣಃ,ಪ್ರಯಾಣಂ, ನೇತ್ರಂ, ಮುಖಂ, ದಕ್ಷಿಣನೇತ್ರಂ, ಲೋಹಂ, ಮುಕ್ತಾಫಲಂ, ಸ್ವರ್ಣಂ, ವಿದ್ಯಾ, ಭುಕ್ತಿಃ, ಕಂಬಳಂ, ರತ್ನಂ, ಧಾತುಃ, ವಿತ್ತಂ, ಈ ೨೪ ನೂ ದ್ವಿತೀಯ ಭಾವದನಾಮಗಳು.

ಮೂ॥ತೃತೀಯಂಭಗಿನೀಭ್ರಾತಾ ಸಹಜಶ್ಚಾಗ್ರಜೋನುಜಃ । ಸಹಭಾವೋ ಕ್ರುಧಾಯೋಗಃ ದಾಸೀದಾಸ್ಯಾದಿವರ್ಗಕಂ॥ ೪॥ ಸತ್ವಂಪರಾಕ್ರಮಃಕೋಪಃರೌದ್ರಂಶಾಂತಮುಪಾಯಕಂ । ಕಾರ್ಯಸಂಧಾನಮಿತ್ರೇಚ ಸ್ವರೋಗರಳಭಕ್ಷಣಂ॥ಅಪೋಕ್ಲೀಬಂದರಕ್ಷೇತ್ರಂ ಭಾವೋಯಂಚ ತೃತೀಯಕಂ॥

ಟೀ॥ತೃತೀಯಂ,ಭಗಿನೀ, ಭ್ರಾತಾ, ಸಹಜ, ಅಗ್ರಜ, ಅನುಜ, ಸಹಭಾವ, ಕ್ರುಧಾರಯೋಗ, ದಾಸೀ, ದಾಸ್ಯಾದಿವರ್ಗಃ, ಸತ್ವಂ, ಪರಾಕ್ರಮಃ, ಕೋಪಃ, ರೌದ್ರಂ, ಶಾಂತಂ, ಉಪಾಯಕಂ, ಕಾರ್ಯಸಂಧಾನಂ, ಮಿತ್ರಂ ಸ್ವರಃ, ಗರಳಭಕ್ಷಣಂ, ಅಪೋಕ್ಲೀಬಂ, ದರಕ್ಷೇತ್ರಂ, ಈ ೨೧ ನ್ನೂ ತೃತೀಯ ಭಾವದಹೆಸರುಗಳು.

ಮೂ॥ಚತುರ್ಥಂಜಲಪಾತಾಳೆಬಂಧುಶ್ಚಹಿಬುಕಂಸುಖಂ॥ ೭॥ ವಾಪೀಕೂಪತಟಾಕಾಶ್ಚಪ್ರವಾಹೋದ್ವಾರಮೇದಿನೀ।ಪುಸ್ತಕಂಗೃಹಶಯ್ಯಾಚಪಶುಸಸ್ಯಂಚಧಾನ್ಯಕಂ॥೮॥ವಿದ್ಯಾವಾಹನಕಾರ್ಯೇಚಮಾತೃಷ್ವಾಷಧಮಂತ್ರಕಂ। ವಿವಾದಸಾಕ್ಷಿಪೌರಾಣಂಭಾವೋಯಂಚಚತುರ್ಥಕಂ॥

ಟೀ ಚತುರ್ಥಂ, ಜಲಂ, ಪಾತಾಳಂ, ಬಂಧುಃ, ಹಿಬುಕಂ, ಸುಖಂ, ವಾಪೀಕೂಪಃ, ತಟಾಕಃ, ಪ್ರವಾಹಃ, ದ್ವಾರಂಃ, ಮೇದಿನೀ,ಪುಸ್ತಕಂ, ಗೃಹಂ, ಶಯ್ಯಾ, ಪಶುಃ, ಸಸ್ಯಂ, ಧಾನ್ಯಕಂ, ವಿದ್ಯಾ, ವಾಹನ,ಕಾರ್ಯಂ, ಮಾತಾ, ಔಷಧಂ, ಮಂತ್ರಕಂ, ವಿವಾದಸಾಕ್ಷಿ, ಪೌರಾಣಂ, ಈ ೨೬ ನ್ನೂ ಚತುರ್ಥಭಾವದಹೆಸರುಗಳು.

ಮೂ॥ಪಂಚಮಂಮಂತ್ರಿಪುತ್ರಶ್ಚತನಯೋಪ್ರತಿಭಾತ್ಮಜಃ।ಪಣಾಪರ

ಶ್ಶಕ್ತಿಶ್ಚ ಭಾವೋಯಂ ಪಂಚಮಸ್ಸ್ಮೃತಃ॥

ಟೀ॥ ಪಂಚಮಂ, ಮಂತ್ರೀ, ಪುತ್ರಃ, ತನಯಃ, ಪ್ರತಿಭಾ, ಆತ್ಮಜಃ, ಪಣಾಪರಃ, ಶಕ್ತಿಃ, ಈ ೮ನ್ನು ಪಂಚಮಭಾವದ ಹೆಸರುಗಳು

ಮೂ॥ ಷಷ್ಠೋವೈರಿರಿಪುಶ್ಶತ್ರುಃ ಕ್ಷತಾರೀರೋಗಭೀತಿದಂ ।
ಜ್ಞಾತಿಶಸ್ತ್ರಾಪಣಂಪಾಪಂ ಭಾವೋಯಂಷಷ್ಠ ಸ್ಸ್ಮೃತಃ ॥

ಟೀ॥ ಷಷ್ಠಃ, ವೈರೀ, ರಿಪುಃ, ಶತ್ರುಃ, ಕ್ಷತಃ, ರೋಗಃ, ಭೀತಿಃ, ಜ್ಞಾತಿಃ, ಶಸ್ತ್ರ, ಆಪಣಂ, ಪಾಪಂ, ಈ ಹನ್ನೆರಡೂ ಷಷ್ಠಭಾವದ ಹೆಸರುಗಳು.

ಮೂ ॥ ಜಾಮಿತ್ರಂಜೂಕಮಸ್ತಂಚಕಾಮೋಭಾರ್ಯೈತಿಚಸ್ಮರಃ । ಕಟಕೋದ್ಯೂತವಾಣಿಜ್ಯಂಕ್ರಯವಿಕ್ರಯಸಂಗ್ರಹಃ ॥೧೩॥ ಕಳತ್ರಂಸೌಖ್ಯವೈವಾಹಂಭೋಗಸ್ಥಾನಂಮನೋಹರಂ । ಅಲಂಕೃತಿಶ್ಚಸರ್ವೇಷಾಂ ಭಾವೋಯಂಸಪ್ತಮಸ್ಸ್ಮೃತಃ

ಟೀ॥ ಜಾಮಿತ್ರಂ, ಜೂಕಂ, ಅಸ್ತಂ, ಕಾಮಃ, ಭಾರ್ಯಾ, ಸ್ಮರಃ, ಕಟಕಃ, ದ್ಯೂತಂ ವಾಣಿಜ್ಯಂ, ಕ್ರಯಃ, ವಿಕ್ರಯಸಂಗ್ರಹಃ, ಕಳತ್ರಂ, ಸೌಖ್ಯಂ, ವೈವಾಹಂ, ಭೋಗಸ್ಥಾನಂ, ಮನೋಹರಂ, ಅಲಂಕೃತಿಃ, ಈ ಹದಿನೇಳುಸಪ್ತಮಭಾವದ ಹೆಸರು.

ಮೂ॥ ಅಷ್ಟಮಂನಿಧನಂರಂಧ್ರಂಮೃತಿರ್ನಾಶಶ್ಚನೈಧನಂ।ಆಯುಷ್ಯಂ ಜೀವನೋಪಾಯಂಮೋಕ್ಷೋಲಯನಿವಾರಣೇ ॥೧೪॥ ಭಕ್ಷ್ಯಭೋಜ್ಯಾದಿನಾಶಶ್ಚಭಾವೋಯಂಚಾಷ್ಟಮಸ್ಸ್ಮೃತಃ॥

ಟೀ॥ ಅಷ್ಟಮಂ, ನಿಧನಂ, ರಂಧ್ರಂ, ಮೃತಿಃ,ನಾಶಃ,ನೈಧನಂ,ಆಯುಷ್ಯಂ, ಜೀವನೋಪಾಯಂ, ಮೋಕ್ಷಃ, ಲಯ, ನಿವಾರಣಂ, ಭಕ್ಷ್ಯಭೋಜ್ಯಾದಿನಾಶಃ. ಈ ಹನ್ನೆರಡೂ ಅಷ್ಟಮಭಾವದ ಹೆಸರುಗಳು.

ಮೂ॥ ನವಮಂತಪದೀಕ್ಷಂಚಸುಕೃತಂಗುರುಭಾಗ್ಯಕಂ ॥೧೫॥ ಪಿತೃಜ್ಞಾನಂದಯಾಭಕ್ತಿರ್ದೇವತೋಪಾಸನಸ್ತಥಾ । ಚಿತ್ತಾನಂದದಧಾಸ್ವಾಮೀಭಾವೋಯಂನವಮಸ್ಸ್ಮೃತಃ॥

ಟೀ॥ ನವಮಂ, ತಪದೀಕ್ಷಂ, ಸುಕೃತಂ, ಗುರುಃ, ಭಾಗ್ಯಕಂ, ಪಿತೃಜ್ಞಾನಂ, ದಯಾಭಕ್ತಿಃ, ದೇವತೋಪಾಸನಂ, ಚಿತ್ತ, ಆನಂದಃ, ಸ್ವಾಮೀ, ಈ ಹನ್ನೆರಡೂ ನವಮಭಾವದ ಹೆಸರುಗಳು

ಮೂ॥ ದಶಮಂಮಾನಸಂಕರ್ಮವ್ಯಾಪಾರೋಂಬರಮೇವಚ।ಕಾರ್ಯಂಚವ್ಯೋಮಮಾಕಾಶಆಜ್ಞಾಪುಣ್ಯದರಾಜ್ಯಕಂ॥೧೬॥ವೀರ್ಯಸ್ಥಾನಂಚಸತ್ಕರ್ಮಭಾವೋಯಂದಶಮಸ್ಸ್ಮೃತಃ॥

ಟೀ॥ ದಶಮಂ, ಮಾನಸಂ, ಕರ್ಮಂ, ವ್ಯಾಪಾರಃ, ಅಂಬರಂ, ಕಾರ್ಯಂ

ವ್ಯೋಮ, ಆಕಾಶಃ, ಆಜ್ಞಾ, ಪುಣ್ಯಂ, ರಾಜ್ಯಕಂ, ವೀರ್ಯಂ, ಸತ್ಕರ್ಮ, ಈ ಹದಿಮೂರು ದಶಮಭಾವದ ಹೆಸರುಗಳು

ಮೂ ॥ ಏಕಾದಶಂಭವೇತ್ಯಾಯುರ್ಗತ್ತರ್ಥಲಾಭೋಜಯಸ್ತಥಾ ॥೧೪॥
ಸ್ಪೃಷ್ಟಂಸ್ಯಾದಧಸ್ಪೃಷ್ಟಂಚಭಾವೋಸ್ಯೈಕಾದಶಸ್ಮೃತಃ॥

ಟೀ॥ಏಕಾದಶಂ, ಆಯುಃ, ಅರ್ಥಲಾಭಃ, ಜಯಃ, ಸ್ಪೃಷ್ಟಂ,ಅಧಃಸ್ಪೃಷ್ಟಂ, ಈ ಆರೂ ೧೧ ನೇ ಭಾವದ ಹೆಸರುಗಳು

ಮೂ॥ ದ್ವಾದಶಾಂತ್ಯೋವ್ಯಯೋರಿಷ್ಫಃ ಅಪ್ರೋಕ್ಷೀಬೋಪವರ್ಗಕಾ॥
ಲಾಕ್ಷೀಣೋನರಕೋನಾಶೊ ಭಾವೋಯಂದ್ವಾದಶಸ್ಮೃತಃ॥

ಟೀ॥ ದ್ವಾದಶ, ಅಂತ್ಯಃ, ವ್ಯಯಃ, ರಿಷ್ಫಃ, ಅಪ್ರೋಕ್ಷೀಬಃ, ಅಪವರ್ಗಃ, ಲಾಕ್ಷೀಣಃ, ನರಕಃ, ನಾಶಃ,ಈ ಒಂಭತ್ತು ೧೨ನೇ ಭಾವದಹೆಸರುಗಳು.

ಭಾವನಿಘಂಟು ಸಂಪೂರ್ಣವು.

---

ಕಾರಕ ನಿಘಂಟು ಪ್ರಾರಂಭವು.

ಮೂ॥ ಆತ್ಮಾಪ್ರಭಾವೊಶಕ್ತಿಶ್ಚಪಿತೃಚಿಂತಾರವೇಃಫಲಂ।

ಟೀ॥ ಆತ್ಮಾ, ಪ್ರಭಾವ, ಶಕ್ತಿಃ, ಇವುಗಳಿಗೆ ಕಾರಕನು ಸೂರ್ಯನು:

ಮೂ॥ ಮನೊಬುದ್ಧಿಃಪ್ರಸಾದಂಚ ಮಾತೃಚಿಂತಾಚಚಂದ್ರಮಾಃ ॥

ಟೀ॥ ಮನಸ್ಸು, ಬುದ್ಧಿ, ಪ್ರಸಾದ, ಮಾತೃಚಿಂತಾ, ಇವುಗಳಿಗೆ ಕಾರಕನು ಚಂದ್ರನು.

ಮೂ ॥ ಭ್ರಾತಾಭೃತ್ಯಗಣೋಭೂಮಿರ್ಗ್ರಾಮಹೀಸುಮಿಚಿಂತಯೇತ್॥

ಟೀ॥ ಭ್ರಾತೃ, ಭೃತ್ಯಗಣಃ, ಭೂಮಿ, ಇವುಗಳನ್ನು ಅಂಗಾರಕನಿಂದಲೇ ಯೋಚಿಸತಕ್ಕದ್ದು, ಅಂಗಾರಕನು ಇವುಗಳಿಗೆ ಕಾರಕನು.

ಮೂ॥ ಪ್ರಜ್ಞಾಚಕರ್ಮವಿಜ್ಞಾನಂ ಬುಧೆನೈವವಿಚಿಂತಯೇತ್॥

ಟೀ॥ ಪ್ರಜ್ಞಾ, ಕರ್ಮ, ವಿಜ್ಞಾನ, ವಿಾ ಮೂರಕ್ಕೆ ಬುಧನೇ ಕಾರಕನು.

ಮೂ॥ ಗುರುಣಾದೇಹಪುಷ್ಟಿಶ್ಚ ಬುದ್ಧಿಃಪುತ್ರಾರ್ಥಸಂಪದಃ ।

ಟೀ॥ದೇಹಪುಷ್ಟಿ, ಬುದ್ಧಿ,ಪುತ್ರ,ಅರ್ಥಸಂಪತ್ತು,ಇವುಗಳಿಗೆಗುರುವು ಕಾರಕ

ಮೂ॥ ಶುಕ್ರೋವಿವಾಹಂಭಾಗ್ಯಂಚ ಭೋಗಸ್ಥಾನಂಚವಾಹನಂ॥

ಟೀ॥ಶುಕ್ರನು, ವಿವಾಹ, ಭಾಗ್ಯ, ಭೋಗಸ್ಥಾನ, ವಾಹನ, ಇವುಗಳಿಗೆ ಕಾರಕನು.

ಮೂ॥ಆಯುಷ್ಯಂ ಜೀವನೋಪಾಯಂ ಮರಣಂಚಶನೈಶ್ಚರಃ ॥

ಟೀ॥ ಶನೈಶ್ಚರನು, ಆಯುಷ್ಯ, ಜೀವನೋಪಾಯ, ಮರಣ, ಇವುಗಳಿಗೆ ಕಾರಕನು.

ಮೂ॥ ತಟಾಕಾರಾಮವಿಶ್ರಾಮಾನ್ ರಾಹುರ್ಮಾತಾಮಹಂ ಭವೇತ್॥

ಟೀ॥ ರಾಹುವು, ತಟಾಕ, ಉದ್ಯಾನ, ವಿಶ್ರಾಮ, ಮಾತಾಮಹ, ಇವುಗಳಿಗೆ ಕಾರಕನು.

ಮೂ॥ ಕೇತೋಃ ಪಿತಾಮಹಶ್ಚಿಂತಾ ಬಹುಧಾನಶ್ಚ ಮೋಕ್ಷದಃ॥

ಟೀ॥ ಕೇತುವು, ಪಿತಾಮಹ, ಚಿಂತಾ, ಬಹುಧಾನ, ಮೋಕ್ಷ ಇವುಗಳಿಗೆ ಕಾರಕನು.

ಕಾರಕನಿಘಂಟು ಸಂಪೂರ್ಣವು.

---

ಅಂಕೆಗಳಸಂಜ್ಞಾನಿಘಂಟು.

ಮೂ॥ ಶಶೀಸೋಮಶ್ಶಶಾಂಕಶ್ಚ ಇಂದುಶ್ಚಂದ್ರಕಳಾನಿಧಿಃ।
ರಾಜಾವಿಧುಸ್ಸುಧಾಂಶುಶ್ಚ ಯಮಏಕಜನಸ್ತಥಾ॥

ಟೀ॥ ಶಶೀ, ಸೋಮ, ಶಶಾಂಕಃ, ಇಂದುಃ, ಚಂದ್ರಃ, ಕಳಾನಿಧಿಃ, ರಾಜಾ, ವಿಧುಃ, ಸುಧಾಂಶುಃ, ಯಮಃ, ಏಕಃ, ಜನಃ, ಯಿವು ೧೨ನ್ನು ಒಂದು ಅಂಕೆಯ ಹೆಸರುಗಳು

ಮೂ॥ ಅಕ್ಷೀಚಕ್ಷುಃಕರಂನೇತ್ರಂಲೋಚನಂಬಾಹುಕರ್ಣಕಾಃ।
ಪಕ್ಷೌದೃಷ್ಟಿರ್ದ್ವಯಂಯುಗ್ಮಂಅಂಬಕೌನಯನೇಕ್ಷಣೇ॥

ಟೀ॥ ಅಕ್ಷಿ, ಚಕ್ಷುಃ, ಕರಂ, ನೇತ್ರಂ, ಲೋಚನಂ, ಬಾಹುಃ, ಕರ್ಣಕಃ, ಪಕ್ಷೌ, ದೃಷ್ಟಿಃ, ದ್ವಯಂ, ಯುಗ್ಮಂ, ಅಂಬಕಾ, ನಯನೇ, ಯೀಕ್ಷಣಂ, ಯಿವು ೧೪ನ್ನು ಯೆರಡೆಂಬ ಸಂಖ್ಯೆಗಳ ಹೆಸರುಗಳು.

ಮೂ॥ ವಹ್ನಿ ರಾಮಶಿಖೀಚಾಗ್ನಿಃ ಪಾವಕೋದಹನಾನಲೌ।
ಶಂಕರಾಕ್ಷಿಃಪುರೀಲೋಕಾಃತ್ರೀಣಿಕಾಲಾಸ್ತ್ರಯೋಗುಣಾಃ॥

ಟೀ॥ ವಹ್ನಿಃ, ರಾಮಃ, ಶಿಖೀ, ಅಗ್ನಿಃ, ಪಾವಕಃ, ದಹನಃ, ಅನಲಃ, ಶಂಕರಾಕ್ಷಿ, ಪುರ, ಲೋಕಃ, ತ್ರೀಣಿ, ಕಾಲಃ, ತ್ರಯಂ, ಗುಣಃ, ಯಿವು ೧೪ನ್ನು ಮೂರೆಂಬ ಅಂಕೆಗೆ ಹೆಸರುಗಳು.

ಮೂ॥ ಅಬ್ಧಿಸಾಗರಚತ್ವಾರೀವನರಾಶಿರ್ಯುಗೋಂಬುಧಿಃ।
ಚತುರ್ವಾರ್ಧಿಗತಿಶ್ಚಾಪಿ ಜಲಧೀನೀರಧಿಸ್ತಥಾ॥

ಟೀ॥ ಅಬ್ಧಿಃ, ಸಾಗರಃ, ಚತ್ವಾರಿ, ವನರಾಶಿಃ, ಯುಗಃ, ಅಂಬುಧಿಃ, ಚತುಃ, ವಾರ್ಧಿಃ, ಗತಿಃ, ಜಲಧಿಃ, ನೀರಧಿಃ, ಯಿವು ೧೧ನ್ನು ನಾಲ್ಕರ ಅಂಕೆಯ ಹೆಸರುಗಳು

ಮೂ॥ ಇಂದ್ರಿಯಂಪಂಚಮಂಜ್ಞಾನಂ ಯಿಷುಬಾಣಾಶ್ಚಮಾರ್ಗಣಾಃ।
ಪುತ್ರೋಭೂತಂಶರಃಪರ್ವಾ ಪ್ರಾಣಾಶ್ಚವಿಷಯಸ್ತಥಾ॥

ಟೀ॥ ಇಂದ್ರಿಯಂ, ಪಂಚಮಂ, ಜ್ಞಾನಂ, ಇಷುಃ, ಬಾಣಃ, ಮಾರ್ಗಣಃ, ವ್ರತಂ, ಭೂತಂ, ಶರಃ, ಪರ್ವ, ಪ್ರಾಣಃ, ವಿಷಯಃ, ಈ ೧೨ ಐದರ ಅಂಕೆಯ ಹೆಸರುಗಳು.

ಮೂ॥ ಶಾಸ್ತ್ರಂ ಷಟ್ಕ ರುಚಿಶ್ಚೈವ ಕಾಲಶ್ಚ ಋತುಸಂಜ್ಞಿತಂ।
ರಸದ್ರವ್ಯಂಚ ಕೋಶಶ್ಚ ಷಟ್ದರ್ಶನ ಷಡಾಗಮಾಃ॥

ಟೀ॥ ಶಾಸ್ತ್ರಂ, ಷಟ್, ರುಚಿಃ, ಕಾಲಃ, ಋತುಃ, ರಸಃ, ದ್ರವ್ಯಂ, ಕೋಶಃ, ಷಟ್, ದರ್ಶನಂ, ಷಡಾಗಮಾಃ, ಈ ೯ ಆರರ ಅಂಕೆಗೆ ಹೆಸರುಗಳು.

ಮೂ॥ ಶೈಲೋಽದ್ರಿರ್ದ್ವೀಪವಾಯುಶ್ಚ ಮುನಿಸ್ಸಪ್ತಾಚಲೋಗಿರಿಃ।
ತುರಗಾಶ್ವನಗಾಃಗೋತ್ರಾ ನಾಗೇಂದ್ರ ಋಷಿಸಂಜ್ಞಕಾಃ॥

ಟೀ॥ ಶೈಲಃ, ಅದ್ರಿಃ, ದ್ವೀಪಃ, ವಾಯುಃ, ಮುನಿಃ, ಸಪ್ತ, ಅಚಲಃ, ಗಿರಿಃ, ತುರಗಃ, ಅಶ್ವಃ, ನಗಃ, ಗೋತ್ರಃ, ನಾಗೇಂದ್ರಃ, ಋಷಿಃ, ಈ ೧೪ ನ್ನು ಏಳನೇ ಅಂಕೆಯ ಹೆಸರುಗಳು.

ಮೂ॥ ಅಷ್ಟಮಂಗಜಕರ್ಣೀಚ ದಿಗ್ಗಜೋದಂತಿಹಸ್ತಿಚ।
ಸಾಮಜೋಮತ್ತಮಾತಂಗಾಃ ದಿಕ್ಪಾಲವಸುವಾರಣಾಃ॥

ಟೀ॥ ಅಷ್ಟಮಂ, ಗಜಃ, ಕರ್ಣೀ, ದಿಗ್ಗಜಃ, ದಂತೀ, ಹಸ್ತಿ, ಸಾಮಜಃ, ಮತ್ತಮಾತಂಗಃ, ದಿಕ್ಪಾಲಃ, ವಸುಃ, ವಾರಣಃ, ಈ ೧೧ ನ್ನು ಎಂಟನೇ ಅಂಕೆಯ ಹೆಸರುಗಳು

ಮೂ॥ ನವಮಂ ನವರತ್ನಂಚ ಬಹ್ಮಾಚ ಕಮಲಾಸನಃ।
ನಿಧಿಗ್ರಹಶ್ಚ ಖಂಡಂಚ ರಂಧ್ರ ಭಾವಸ್ತು ಲಬ್ಧಿಕಾಃ॥

ಟೀ॥ ನವಮಂ, ನವರತ್ನಂ, ಬಹ್ಮ, ಕಮಲಾಸನಃ, ನಿಧಿಃ, ಗ್ರಹಃ, ಖಂಡಂ, ರಂಧ್ರಃ, ಭಾವಃ, ಈ ೯ ಒಂಭತ್ತೆಂಬ ಸಂಖ್ಯೆಗೆ ಹೆಸರುಗಳು

ಮೂ॥ ಆಕಾಶಂಗಗನಂ ಶೂನ್ಯಂ ಅಂತರಿಕ್ಷಂ ಮರುತ್ಪಥಂ॥

ಟೀ॥ ಆಕಾಶಂ, ಗಗನಂ, ಶೂನ್ಯಂ, ಅಂತರಿಕ್ಷಂ, ಮರುತ್ಪಥಂ, ಯೀ ೫ ನ್ನು ಸೊನ್ನೆಗಳಿಗೆ ಹೆಸರುಗಳು.

ಮೂ॥ ಕಾದಿರ್ನವಟಾದಿನವಃಪಾದಿಪಂಚಶ್ಚಯಾದ್ಯಷ್ಟಕಃ॥

ಟೀ॥ ಕಕಾರ ಮೊದಲು ೯ ಅಕ್ಷರಗಳೂ, ಟಕಾರ ಮೊದಲು ೯ ಅಕ್ಷರಗಳೂ, ಪಕಾರ ಮೊದಲು ೫ ಅಕ್ಷರಗಳೂ, ಯಕಾರ ಮೊದಲು ೮ ಅಕ್ಷರಗಳೂ, ಅಂಕೆಗಳ ಹೆಸರ್ಗಳೆಂದು ತಿಳಿಯತಕ್ಕದ್ದು. ಅಂದರೆ,— ೧ಕ— ೨ಖ— ೩ಗ— ೪ಘ— ೫ಙ— ೬ಚ— ೭ಛ— ೮ಜ— ೯ಝ— ೧ಟ— ೨ಠ— ೩ಡ— ೪ಢ— ೫ಣ— ೬ತ— ೭ಥ— ೮ದ— ೯ಧ— ೧ಪ— ೨ಫ— ೩ಬ— ೪ಭ— ೫ಮ— ೧ಯ— ೨ರ— ೩ಲ— ೪ವ— ೫ಶ— ೬ಷ— ೭ಸ— ೮ಹ— ಮೊ. ಮೇರೆ

ಕವರ್ಗ-೯, ಟವರ್ಗ ೯, ಪವರ್ಗ ೫, ಯವರ್ಗ ೪ ಎಂಬದಾಗಿವರ್ಗಾಕ್ಷರ ಗಳನ್ನು ತಿಳಿಯುವದು.

ಅಂಕ ಸಂಜ್ಞಾ ನಿಘಂಟು ಸಂಪೂರ್ಣವು.

---

ರಾಶಿಗಳ ನಾಮಾಂತರ ಅಧಿಪತಿಗಳು.

ಶ್ಲೋ॥ ಕ್ರಿಯತಾವುರುಜಿತಮಕುಳೀರಲೇಯಪಾಥೋನಜೂಕಧೋರ್ಕ
ರಶ್ಚಿಖ್ಯಃ। ತೌಕ್ಷಿಕಆಕೋಕೇರೋಹೃದ್ರೋಗಶ್ಚಾಂತ್ಯಂಭಂ
ಚದಂ। ಕ್ಷಿತಿಜಸಿತಜ್ಞಚಂದ್ರರವಿಸೌಮ್ಯಸಿತಾವನಿಜಾಃ ಸುರ
ಗುರುಮಂದಸೌರಿಗುರವಶ್ಚ ಗೃಹಾಂಶಪಾಃ॥

ಟೀ॥ ಕ್ರಿಯ, ತಾವುರು, ಜಿತಮ, ಕುಳೀರ, ಲೇಯ, ಪಾಥೋನ,ಜೂಕ, ಕೌರ್ಪಿ, ತೌಕ್ಷಿಕ, ಆಕೋಕೇರ, ಹೃದ್ರೋಗ, ಅಂತ್ಯಭ ಯಿವುಗಳನ್ನು ಮೇಷ ಮೊದಲು ಮೀನದವರಿಗೂ ರಾಶಿಗಳ ನಾಮಾಂತರಗಳು

ಮೇಷಕ್ಕೆ ಕುಜನು, ವೃಷಭಕ್ಕೆ ಶುಕ್ರನು, ಮಿಥುನಕ್ಕೆ ಬುಧನು, ಕಟಕಕ್ಕೆ ಚಂದ್ರನು, ಸಿಂಹಕ್ಕೆ ಸೂರ್ಯನು, ಕನ್ಯೆಗೆ ಬುಧನು, ತುಲೆಗೆ ಶುಕ್ರನು, ವೃಶ್ಚಿಕಕ್ಕೆ ಅಂಗಾರಕನು, ಧನಸ್ಸಿಗೆ ಗುರುವು, ಮಕರಕ್ಕೆ ಶನಿಯು, ಕುಂಭಕ್ಕೆ ಶನಿಯು, ಮೀನಕ್ಕೆ ಗುರುವು, ಯಿವೇರೆ ರಾಶ್ಯಧಿಪತಿಗಳನ್ನು ತಿಳಿಯುವದು.

ಗ್ರಹಗಳ ಶತ್ರುಮಿತ್ರತ್ವವು

ಸೂತ್ರವು--ಸ್ವಸ್ವಾಂತ್ಯಧೀಧರ್ಮಸ್ವೋಚ್ಚಾಯುಸ್ಸುಖಪಾಃ॥

ಟೀ॥ ಸೂರ್ಯನಿಗೆ ಶನಿ, ಶುಕ್ರರು ಶತ್ರುಗಳು, ಬುಧನು ಸಮನು, ಚಂದ್ರ ಕುಜ ಗುರುವು ಮಿತ್ರರು, ಚಂದ್ರನಿಗೆ ರವಿ ಬುಧರು ಮಿತ್ರರು, ಕುಜ, ಗುರುವು ಶುಕ್ರನು, ಶನಿ ಇವರು ಸಮರು, ಕುಜನಿಗೆ ಗುರು, ಚಂದ್ರ ರವಿಗಳು ಮಿತ್ರರು, ಬುಧನು ಶತ್ರುವು, ಶುಕ್ರ ಶನಿಗಳು ಸಮರು, ಬುಧನಿಗೆ ರವಿ ಶುಕ್ರರು ಮಿತ್ರರು, ಚಂದ್ರನು ಶತ್ರುವು, ಕುಜ ಗುರು ಶನಿಗಳು ಸಮರು, ಗುರುವಿಗೆ ಬುಧ ಶುಕ್ರರು ಶತ್ರುಗಳು, ಶನಿ ಸಮನು, ರವಿ ಚಂದ್ರ ಕುಜರು ಮಿತ್ರರು ಶುಕ್ರನಿಗೆ ಬುಧ ಶನಿಗಳು ಮಿತ್ರರು, ಕುಜ ಗುರುಗಳು ಸಮರು, ರವಿ ಚಂದ್ರರು, ಶತ್ರುಗಳು, ಶನಿಗೆ ಶುಕ್ರ ಬುಧರು ಮಿತ್ರರು,ಗುರು ಸಮನು ರವಿಚಂದ್ರ ಕುಜರು ಶತ್ರುಗಳೆಂದು ತಿಳಿಯತಕ್ಕದ್ದು

ಉಚ್ಚ ನೀಚ ಗ್ರಹಗಳು.

ಶ್ಲೋ॥ ಅಜೋಕ್ಷನಕ್ರಪ್ರಮದೋನಕರ್ಕೀಮತ್ಸ್ಯತುಲಾಕ್ರಮಾತ್
ರವ್ಯಾದಿತುಂಗಾನೀಚಂತು ತತ್ತತ್ಸಪ್ತಮಮಾಚರೇತ್॥

ಟೀ॥ ಸೂರ್‍ಯನಿಗೆ ಮೇಷವು ಉಚ್ಚರಾಸಿಯು, ಅದಕ್ಕೇಳನೇ ತುಲಾರಾಶಿ ನೀಚರಾಶಿ, ಚಂದ್ರನಿಗೆ ವೃಷಭವುಚ್ಚ, ಅದಕ್ಕೇಳನೇ ವೃಶ್ಚಿಕನೀಚರಾಶಿ, ಅಂಗಾರಕನಿಗೆ ಮಕರವುಚ್ಚರಾಶಿ, ಅದಕ್ಕೇಳನೇ ಕಟಕನೀಚರಾಶಿ, ಬುಧನಿಗೆ ಕನ್ಯೆಯು, ಉಚ್ಚರಾಶಿ, ಅದಕ್ಕೇಳನೇ ಮೀನ ನೀಚರಾಶಿ, ಗುರುವಿಗೆ ಕಟಕವುಚ್ಚ, ಅದಕ್ಕೇಳನೇ ಮಕರ ನೀಚರಾಶಿ, ಶುಕ್ರನಿಗೆ, ಮೀನ ವುಚ್ಚ ರಾಶಿ, ಅದಕ್ಕೇಳನೇ ಕನ್ಯ ನೀಚರಾಶಿ, ಶನಿಗೆ ತುಲೆಯುಚ್ಚರಾಶಿ, ಅದಕ್ಕೇಳನೇ ಮೇಷ ನೀಚರಾಶಿ, ಎಂಬದಾಗಿ ತಿಳಿಯತಕ್ಕದ್ದು.

## ಗ್ರಹಗಳ ದೃಷ್ಟಿಗಳು.

ಸೂತ್ರ॥ ನಗಭಾಮಜಥ್ವೇಕ್ಷಣಂ॥

ಟೀ॥ ಶನಿಗೆ ೩—೭—೧೦ನೇ ರಾಸಿಗಳಲ್ಲಿ ದೃಷ್ಟಿ, ಗುರುವಿಗೆ—೫—೭—೯ನೇ ರಾಶಿಗಳಲ್ಲಿ ದೃಷ್ಟಿಯು, ಕುಜನಿಗೆ೪—೭—೮ನೇರಾಶಿಗಳಲ್ಲಿ ದೃಷ್ಟಿ, ರವಿ, ಚಂದ್ರ, ಬುಧ, ಶುಕ್ರ, ರಾಹು ಕೇತುಗಳಿಗೆ ೭ನೇರಾಶಿಗಳಲ್ಲಿ ದೃಷ್ಟಿಯೆಂದು ತಿಳಿಯುವದು.

## ಷಡ್ವರ್ಗ.

ಸೂ॥ ಓಜಯುಗ್ಮ ರವಿಚಂದ್ರಾ॥

ಟೀ॥ ದ್ವಾದಶರಾಶಿಗಳಲ್ಲಿ ಒಂದು ಓಜ, ಒಂದು ಯುಗ್ಮ ಯೆಂಬದಾಗಿಮೇಷಮೊದಲು ೧—೩—೫—೭—೯—೧೧—ಈ ೬ ರಾಸಿಗಳು ಓಜಗಳು ೨—೪—೬—೮ ೧೦—೧೨— ಈ ೬ ಯುಗ್ಮಗಳು ಇವುಗಳಲ್ಲಿ ಓಜದಲ್ಲಿ ಮೊದಲನೇ ಅರ್ಧಬಾಗ ಸೂರ್‍ಯಹೋರೆ, ೨ನೇ ಅರ್ಧಬಾಗ ಚಂದ್ರಹೋರೆ, ಯೆಂಬದಾಗಿಯೂ ಯುಗ್ಮದಲ್ಲಿ ೧ನೇ ಅರ್ಧಭಾಗ ಚಂದ್ರ ಹೋರೆ, ೨ನೇ ಅರ್ಧಭಾಗ ಸೂರ್‍ಯಹೋರೆ ಯೆಂಬದಾಗಿಯೂ ತಿಳಿಯತಕ್ಕದ್ದು.

## ದ್ರೇಕ್ಕಾಣ.

ಸೂತ್ರ॥ ಲಗ್ನತ್ರಿಭಾಗೊದ್ರೇಕ್ಕಾಣಃ॥

ಟೀ॥ ಮೇಷಾದಿ ೧೨ ರಾಶಿಗಳಲ್ಲಿ ಮೇಷ ಚರ, ವೃಷಭ ಸ್ಥಿರ, ಮಿಥುನ ಉಭಯರಾಸಿ, ಈ ಮೇರೆ ಮೇಷ, ಕಟಕ, ತುಲಾ, ಮಕರ ಈ ೪ ರಾಸಿಗಳು. ಚರಗಳು. ವೃಷಭ, ಸಿಂಹ, ವೃಶ್ಚಿಕ, ಕುಂಭ ಈ ೪ ರಾಸಿಗಳು ಸ್ಥಿರಗಳು. ಮಿಥುನ, ಕನ್ಯಾ, ಧನುಸ್ಸು, ಮೀನ ಈ ೪ ರಾಸಿಗಳು ದ್ವಿಸ್ವಭಾವಗಳು. ಇವುಗಳಲ್ಲಿ ಯೊಂದೊಂದು ರಾಸಿಯನ್ನು ಮೂರುಬಾಗಮಾಡಿದರೆ ಆ ಬಾಗಗಳಿಗೆ ದ್ರೇಕ್ಕಾಣವೆಂದು ಸಂಜ್ಞೆಯು. ಇದಕ್ಕೆಚರರಾಸಿಯಲ್ಲಿ ಮೊದಲು ದ್ರೇಕ್ಕಾಣ ಭಾಗವು. ಆಲಗ್ನವೇ ಯರಡನೇ ಭಾಗವು ಅದಕ್ಕೈದನೇ ರಾಸಿ, ೩ನೇ ಭಾಗವು. ಅದಕ್ಕೆ ೯ನೇ ರಾಸಿಯು ಈ ಮೇರೆ ಸ್ಥಿರ ರಾಸಿಗೆ ೧ನೇಭಾಗ ನವ

ಷರಾಸಿ ೨ನೇ ಭಾಗ ಲಗ್ನವು. ೩ನೇಭಾಗ ಪಂಚಮರಾಶಿ, ದ್ವಿಸ್ವಭಾವರಾಸಿಗೆ ೧ನೇ ಭಾಗ ಪಂಚಮರಾಶಿ ೨ನೇಭಾಗ ನವಮರಾಶಿ ೩ನೇ ಭಾಗ ಲಗ್ನರಾಸಿಯೆಂಬದಾಗಿಯೂ ಆ ರಾಶ್ಯಧಿಪತಿಗಳು ದ್ರೇಕ್ಕಾಣಾಧಿಪತಿಗಳೆಂಬದಾಗಿಯೂ ತಿಳಿಯತಕ್ಕದ್ದು.

## ನವಾಂಶ

ಸೂತ್ರ॥ ನವಾಂಶೋನವಧಾಂಶಃ ಅಜಮೃಗತೌಲಿಚಂದ್ರಭವನಾದಿಃ॥

ಟೀ॥ ಲಗ್ನವನ್ನು ೯ ಭಾಗ ಮಾಡಿದರೆ ಆ ಭಾಗಗಳಿಗೆ ನವಾಂಶಗಳೆಂದು ಹೆಸರು. ಆ ಭಾಗಗಳನ್ನು ಮೇಷ, ಸಿಂಹ, ಧನಸ್ಸು, ಈ ಮೂರು ರಾಶಿಗಳಪೈಕಿ ಯಾವರಾಶಿಗೆ ನವಾಂಶ ನೋಡಬೇಕಾದರೂ ಮೇಷ ಮೊದಲು ಎಣಿಸಬೇಕು ವೃಷಭ, ಕನ್ಯಾ, ಮಕರ ಈ ಮೂರುಗಳ ಪೈಕಿ ಯಾವದಕ್ಕಾದರು ತುಲಾಮೊದಲು ಯೆಣಿಸಬೇಕು ಕಟಕ, ವೃಶ್ಚಿಕ, ಮೀನ ಗಳಪೈಕಿ ಯಾವದಕ್ಕಾದರೂ ಕಟಕ ಮೊದಲು ಎಣಿಸತಕ್ಕದ್ದು. ಹೀಗೆ ಯೆಣಿಸುವಾಗ ಜನನ ಮೊದಲಾದ ಕಾರ್ಯಗಳು ಎಷ್ಟನೇ ಭಾಗದಲ್ಲಾಗುತ್ತವೋ ಆ ಭಾಗ ಯಾವ ಲಗ್ನವೋ ಅದೇನವಾಂಶ ಲಗ್ನವೆಂದು ತಿಳಿಯಬೇಕು.

## ದ್ವಾದಶಾಂಶ.

ಸೂತ್ರ ॥ ರವಿಭಾಗೋದ್ವಾದಶಾಂಶಃ॥

ಟೀ॥ ಲಗ್ನವನ್ನು ಹನ್ನೆರಡು ಭಾಗಮಾಡಿ ಅದನ್ನೊಂದುಭಾಗಕ್ಕೆ ಒಂದು ರಾಸಿಯಾಗಿ ಯೆಣಿಸುವಲ್ಲಿ ಯಾವಭಾಗದಲ್ಲಿ ಕಾಲ ನಿಲ್ಲುತ್ತದೋ ಅದೇದ್ವಾದಶಾಂಶರಾಸಿ ಯೆಂಬದಾಗಿಯೂ ಅದಕ್ಕಧಿಪತಿಯು ದ್ವಾದಶಾಂಶಾಧಿಪತಿ ಯೆಂಬದಾಗಿಯೂ ತಿಳಿಯುವದು.

## ತ್ರಿಂಶಾಂಶಗಳು

ಸೂತ್ರ॥ ಭೌಮಮಂದಗುರುಜಶ್ಶುಕ್ರಾಃಶರಾಮಾದಾಸೌಮವಕ್ರಾಂ ॥೨॥

ಟೀ॥ ಲಗ್ನವನ್ನು ೩೦ಭಾಗ ಮಾಡಿ ಅವುಗಳಲ್ಲಿ ಲಗ್ನ ವಿಷಮರಾಶಿಯಾದರೆ ಮೊದಲು ಕುಜನಿಗೆ ಭಾಗ ೫. ಶನಿಗೆ ಭಾಗ ೫ ಗುರುವಿಗೆ ಭಾಗ ೮ ಬುಧನಿಗೆ ಭಾಗ ೭. ಶುಕ್ರನಿಗೆ ಭಾಗ೫ ಲಗ್ನ ಸಮರಾಸಿಯಾಗಿ ಇದನ್ನು ವ್ಯತ್ಯಾಸವಾಗಿ ಮೊದಲು ಶುಕ್ರನಿಗೆ ಭಾಗ ೫ ಬುಧನಿಗೆ ಭಾಗ ೭. ಗುರುವಿಗೆ ಭಾಗ ೮. ಶನಿಗೆ ಭಾಗ೫ ಕುಜನಿಗೆ ಭಾಗ೫. ಈ ಮೇರೆ ತಿಳಿಯುವದು.

## ರಾಹುಕಾಲವು

ಸೂತ್ರ॥ ವಿಧುಸೌರಿಭೃಗುಸುತಜಜೀವಭೌಮಾರ್ಕಾಃ ॥೧॥ ತ್ರಿಪಾದ ತ್ರೀಣ್ಯಷ್ಟದ್ರಿಃ॥

ಟೀ॥ ಸೋಮವಾರದಲ್ಲಿ ೩॥। ಗಳಿಗೆಗೆ ಶನಿವಾರದಲ್ಲಿ ೭॥ ಶುಕ್ರವಾರದ

ಲ್ಲಿ ೧೧।, ಬುಧವಾರದಲ್ಲಿ ೧೫, ಗುರುವಾರದಲ್ಲಿ ೧೪।।।, ಶನಿವಾರದಲ್ಲಿ ೬।।, ಆದಿತ್ಯವಾರದಲ್ಲಿ ೨೬।, ಈ ವಾರಗಳಲ್ಲಿ ಇಷ್ಟಿಷ್ಟು ಗಳಿಗೆಗಳ ಮೇಲೆ ೩।। ಗಳಿಗೆ ರಾಹುಕಾಲವೆಂದು ತಿಳಿಯುವದು.

## ನಕ್ಷತ್ರತ್ಯಾಜ್ಯವು.

ಮೂ॥ ನೈಕಂವೀಂನಲಂನೇಷೋಂ ಕ (ಲಂನರಂಘಾಲಿನಾ। ಗೊ
ದೀರಂಹಯುಕಾರಿಣೀರಚಂಯುಬೋಪೊನೆಕಭೀಕ ತನಃ। ವಾರಂನೀರ
ನಕಂನಕಂಹಯುತಪ್ರೋಷ್ಠಾರಂನಗಂದಸ್ರಃ। ಸಂವ್ಯೋಧ್ವಂವಿಷನಾ
ಡಿಕಾಅಧಯೋಲಗ್ನ ಸ್ವಶೋನ್ಯತ್ಯದಃ।

ಟೀ॥ ಅಶ್ವಿನಿಗೆ ೫೦, ಭರಣಿಗೆ ೪, ಕೃತ್ತಿಕೆ ೩೦, ರೋ ೪೦, ಮೃ ೧೪, ಆರ್ದ್ರ ೨೧, ಪುನ ೩೦, ಪುಷ್ಯ ೨೦. ಆಶ್ಲೇ ೩೨, ಮಘೆ ೩೦, ಪೂಫ ೨೦, ಉ-ಫ ೧, ಹ ೨೧, ಚಿ ೨೦, ಸ್ವಾತಿ ೧೪, ವಿಶಾ ೧೪, ಅನೂ ೧೦, ಜ್ಯೇ ೧೪, ಮೂ ೨೦, ೫೬, ಪೂಷಾ ೨೪, ಉಷಾ ೨೦, ಶ್ರ ೧೦, ಧ ೧೦, ಶತ ೧೮, ಪೂಭಾ ೧೬, ಉಭಾ ೨೪, ರೇ ೩೦, ಈ ನಕ್ಷತ್ರಗಳಿಗೆ ಈ ಗಳಿಗೆಗಳ ಮೇಲೆ ೪ ಘಟಿಕೆಗಳವರಿಗೂ ತ್ಯಾಜ್ಯಕಾಲ ಆಗ ಯಾವಕಾರ್ಯವನ್ನು ಮಾಡಬಾರದು.

## ಪಕ್ಷಚ್ಛಿದ್ರಗಳು

ಮೂ॥ ಅಷ್ಟಮೀದ್ವಾದಶೀಷಷ್ಠೀಚತುರ್ಥೀಚತುರ್ದಶೀ। ಪಕ್ಷಚ್ಛಿ
ದ್ರಾಖ್ಯತಿಥಯಶ್ಶುಭಕಾರ್ಯೇಷುನಿಂದಿತಾಃ॥

ಟೀ॥ ಶುಕ್ಲ ಕೃಷ್ಣ ಪಕ್ಷಗಳಲ್ಲಿ ಅಷ್ಟಮಿ, ದ್ವಾದಶೀ, ಷಷ್ಠೀ, ಚತುರ್ಥೀ, ಚತುರ್ದಶೀ, ಯೀ ತಿಥಿಗಳು ಪಕ್ಷಚ್ಛಿದ್ರಗಳು. ಇವುಗಳಲ್ಲಿ ಶುಭಕಾರ್ಯಗಳನ್ನು ಮಾಡಬಾರದು.

## ಜಾತ ಕರ್ಮ

ಮೂ॥ ತಸ್ಮಿನ್ ಜನ್ಮಮುಹೂರ್ತೇಪಿಸೂತಕಾಂತೇಥವಾಶಿಶೋಃ। ಜಾತ
ಕರ್ಮಚಕರ್ತವ್ಯಂಪಿತೃಪೂಜನತತ್ಪರೈಃ॥

ಟೀ॥ ಮಗು ಹುಟ್ಟಿದ ಮುಹೂರ್ತದಲ್ಲಾಗಲಿ ಸೂತಕತೀರಿದ ಬಳಿಕಾಗಲಿ ಅದಕ್ಕೆ ಜಾತಕರ್ಮವನ್ನು ಮಾಡತಕ್ಕದ್ದು.

## ನಾಮಕರಣ ಕಾಲವು.

ಮೂ॥ ಉತ್ತರತ್ರಯಹಸ್ತವಾರುಣಾಸ್ತ್ವಾಷ್ಟ್ರವೈಷ್ಣವ ಪುನರ್ವಸು
ದ್ವಯಂ। ಪೌಷ್ಣಮೂಲಮೃಗವಾಸವಾಶ್ವಿಭೈರ್ನಾಮಕರ್ಮಶುಭದಂ
ವಿದುರ್ಬುಧಾಃ॥

ಟೀ॥ ಉತ್ತರ, ಹಸ್ತಾ, ಚಿತ್ರಾ, ಉಷಾ, ಉಭಾ, ಶತ, ಶ್ರವ, ಪುನ, ಪುಷ್ಯಾ, ರೇವ, ಮೂ, ಮೃಗ, ಧನಿ, ಅಶ್ವಿನೀ, ಈ ನಕ್ಷತ್ರಗಳು ನಾಮಕರ

ಣಕ್ಕೆ ಯೋಗ್ಯಗಳು.

## ಅನ್ನಪ್ರಾಶನಕಾಲವು,

ಮೂ॥ ಆದಿತ್ಯೇಸೌಮ್ಯವಸುತಿಷ್ಯಕರಾನಿಲಾಶ್ವಿಮೈತ್ರಾಬ್ಧಿವಿಷ್ಣುವರು
ಣೋತ್ತರಭಾಸಿಚಿತ್ರಾಃ । ಬಾಲಾನ್ನಭೋಜನವಿಧೌದಶಮೆವಃಶುದ್ಧಿಭಿ
ದ್ರಾಕ್ಷಿಹಾಯುನವಮಿಂತಿಷಯುಃಶುಭಾಸ್ಯಃ॥

ಟೀ॥ ಪುನ, ಮೃಗ, ಧ, ಪುಷ್ಯ, ಹ, ಸ್ವಾತಿ, ಅಶ್ವಿ, ಅನೂ, ಶ್ರವ, ಶತ, ಉತ್ತ, ಉಷಾ, ಉಭಾ, ಚಿತ್ರಾ, ಯೀ ೧೪ ನಕ್ಷತ್ರಗಳು ಉತ್ತಮಗಳು, ೮–೧೨–೬–೪–೧೪–೯–೩೦–೧೫ ಯೀ ತಿಥಿಗಳಲ್ಲಿ ಕಡಮೇ ತಿಥಿಗಳಲ್ಲಿ ಲಗ್ನಕ್ಕೆ, ಲಗ್ನಶುದ್ಧಿ ದಶಮಶುದ್ಧಿ ಇರುವಾಗ ಶಿಶುವಿಗೆ ಅನ್ನಪ್ರಾಶನಮಾಡಬೇಕು.

## ಕರ್ಣವೇಧನ ಕಾಲವು

ಮೂ ॥ ಹರಿಹರಾಕರ್ಚಿತ್ರಾಸೌಮ್ಯಪೌಷ್ಣೋತ್ತರಾಶ್ಯಾದಿತಿವಸುಷುಘ
ಟಾಳೀಸಿಂಹಲಗ್ನೇ ವಿವರ್ಜ್ಯ । ಶಶಿಬುಧಗುರುಶಾವ್ಯಾನಾಂಸಿತೆಪದ್ವಿರಿಕ್ತೇತರ
ಹತಿಥಿಷುವಿಶುದ್ಧೈನ್ನೈಧನೆಕರ್ಣವೇಧಃ॥

ಟೀ॥ ಶ್ರ, ಆದ್ರ್ರ, ಹ, ಮೃ, ರೆ, ಉತ್ತ, ಉಷಾ, ಉಭಾ, ಪುಷ್ಯ, ಪುನ, ಧನಿ, ಯೀ ೧೨ ನಕ್ಷತ್ರಗಳಲ್ಲೂ, ಕುಂಭ, ವೃಶ್ಚಿಕ, ಸಿಂಹರಾಶಿಗಳನ್ನು ಬಿಟ್ಟು ಕಡಮೆ ರಾಸಿಗಳಲ್ಲೂ, ಸೋಮ, ಬುಧ, ಗುರು, ಶುಕ್ರವಾರಗಳಲ್ಲೂ, ಶುಕ್ಲಪಕ್ಷದಲ್ಲು–೨–೩–೫–೭–೧೦–೧೩–ಯೀ ತಿಥಿಗಳಲ್ಲೂ, ಲಗ್ನಕ್ಕೆ ಅಷ್ಟಮಶುದ್ಧಿ ಇರುವಾಗಲೂ ಕರ್ಣವೇಧನವು ಶುಭಕರವು.

## ಕೇಶಖಂಡನ ಕಾಲವು.

ಮೂ॥ಅಶ್ವೀಪುಷ್ಯಪುನರ್ವಸೂಮೃಗಶಿರಸ್ಸ್ವಾತ್ಯಂತವಿಷ್ಣುತ್ರಯಂ
ಚಂದ್ರಜ್ಞಾಮರಪೂಜ್ಯಶುಕ್ರಸಹಿತಾಃಪ್ರಾಣಾರ್ಜಯಾಖ್ಯಾಶ್ಶುಭಾಃ।
ಪೂರ್ವಾಹ್ಣೇಶುಭಲಗ್ನಹೋರದಿವಸೆ ಯುಗ್ಮೇಚಮಾಸೆಶಿಶೋ।ಕೆಶಚ್ಛೇದ
ನಮಿಷ್ಟದಂತುವಿವರ್ಯೈರ್ಯುಕ್ತಂವರಾಹಾದಿಭಿಃ॥

ಟೀ॥ ಅಶ್ವಿ, ಪುಷ್ಯ, ಪುನ, ಮೃ, ಸ್ವಾ, ರೇ, ಶ್ರ, ಧ, ಶತ, ಈ ೯ ನಕ್ಷತ್ರಗಳಲ್ಲೂ, ಸೊ, ಬು, ಗುರು, ಶು, ಈ ವಾರಗಳಲ್ಲೂ, ೨–೩–೫–೭–೧೦–೧೩, ಈ ತಿಥಿವಾರಗಳಲ್ಲೂ, ಪೂರ್ವಾಹ್ಣದಲ್ಲೂ, ಶುಭಲಗ್ನ, ಶುಭ ಹೋರಗಳಲ್ಲೂ, ಯುಗ್ಮಮಾಸಗಳಲ್ಲೂ ಶಿಶುವಿಗೆ ಕೇಶಖಂಡನ ಶುಭಕರವು.

## ಕ್ಷೌರಕ್ಕೆ ಕಾಲ.॥

ಮೂ ॥ ಪುಷ್ಯಪುನರ್ವಸುರೆವತಿಹಸ್ತಾಶ್ರವಣಾಧನಿಷ್ಠಾಮೃಗಾಶ್ವಿನಿಚಿ
ತ್ರಾ।ವಾಸವವಾರುಣವಾಯುಗಮೆತದ್ದ್ವಾದಶಯುಕ್ಷಂಕ್ಷೌರಪ್ರಶಸ್ತಂ॥

ಟೀ॥ ಪುಷ್ಯ, ಪುನರ್ವಸು, ರೆ, ಹ, ಶ್ರ, ಧ, ಮೃ, ಅಶ್ವಿ, ಚಿ, ಜ್ಯೆ, ಶತ,

ಸ್ವಾತಿ, ಈ ೧೨ ನಕ್ಷತ್ರಗಳಲ್ಲೂ ಕ್ಷೌರವು ಶುಭಕರವು.

ಕ್ಷೌರವರ್ಜಕಾಲ.

ಮೂ॥ ಮಾತಃಶ್ಚತುರ್ಥೀಚ್ಛಗಿನೀಚತುರ್ದಶೀಭ್ರಾತುಃಶ್ಚಷಷ್ಠೀ
ಪಿತರೌಚಪರ್ವಸು । ಆದೌನವಮ್ಯಾಂಧನಧಾನ್ಯನಾಶಂ
ಕುಟುಂಬಹಾನೀಕ್ಷೌರಾಷ್ಟಮೀಷು॥

ಟೀ॥ ಚತುರ್ಥಿ, ಷಷ್ಠೀ, ಚತುರ್ದಶೀ, ಪಂಚಪರ್ವಗಳು, ಪಾಡ್ಯಮಿ ನವಮಿ, ಅಷ್ಟಮಿ, ಈ ತಿಥಿಗಳಲ್ಲಿ ಕ್ಷೌರವು ಅಶುಭಕರವು.

ವಿದ್ಯಾಭ್ಯಾಸಕಾಲವು

ಮೂ॥ಹಸ್ತಾದಿತ್ಯಸಮೀರಮಿತ್ರಪುರಜಿತ್ಸ್ವಾಷಾಶ್ವಿಚಿತ್ರಾಚ್ಯುತೇಷ್ವಾ
ರಾರ್ಕಾರ್ಕಜವಾಸರಾದಿರಹಿತೇರಾಶೌಚರೇಚೋಭಯೇ। ಪಕ್ಷೇ
ಪೂರ್ಣನಿಶಾಕರೇಪ್ರತಿಪದಂರಿಕ್ತಾಂವಿಹಾಯಾಷ್ಟಮೀಂ।ಷಷ್ಠೀಂ
ಮಷ್ಟಮಶುದ್ಧಿಭಾಜಿಭವನೇಪ್ರೋಕ್ತಾಕ್ಷರಸ್ವೀಕೃತಿಃ॥

ಟೀ॥ಹಸ್ತ, ಪುನರ್ವಸು, ಸ್ವಾತಿ, ಅನೂರಾಧಾ, ಜ್ಯೇಷ್ಠಾ, ರೇವತೀ, ಅಶ್ವಿನೀ, ಚಿತ್ರಾ, ಶ್ರವಣ, ಈ ನಕ್ಷತ್ರಗಳಲ್ಲೂ ರವಿವಾರ,ಮಂಗಳ, ಶನಿ ಈ ವಾರಗಳನ್ನು ಬಿಟ್ಟು ಚರರಾಸಿ ಉಭಯ ರಾಸಿಗಳಲ್ಲೂ, ಶುಕ್ಲ ಪಕ್ಷ ದಲ್ಲೂ ಚಂದ್ರನುಪೂರ್ಣನಾಗಿ ಇರುವಾಗಲೂ ೧-೪-೧೪-೮-೯-೬-೧೫-೩೦ ಈ ತಿಥಿಗಳನ್ನು ಬಿಟ್ಟು ಲಗ್ನಕ್ಕೆ ಅಷ್ಟಮಶುದ್ಧಿ ಮೂಢಾದಿ ದೋಷಗ ಳಿಲ್ಲದಿರುವಾಗಲೂ ಅಕ್ಷರಸ್ವೀಕಾರ ಮಾಡತಕ್ಕದ್ದು

ಉಪನಯನ ಪ್ರಕರಣ.

ಮೂ॥ ಚಂದ್ರಾದಿತ್ಯೋತ್ತರಾಶ್ವಿಶ್ರವಣವಸುಮರುತ್ತ್ವಷ್ಟೃಪೌಷ್ಣಾ
ರ್ಕಮಿತ್ರಸ್ರಾಜೇಶಾರ್ಯೇಪುಸೌಮ್ಯಾಮರಗುರುಶಶಿಭೃಗಾರಾಂ
ಶಕೇಷೂಪನೀತಃ। ತ್ಯಕ್ತ್ವಾನಧ್ಯಾಯರಿಕ್ತಾಂಪಿತೃತಿಥಿಷು ಯ
ಮಾರ್ಕಯುಕ್ತಾನ್ಯರಾಶೌಗೋಜೋಸಾಂತ್ಯಂಗನಾಟಕತುಲ
ಮಿಥುನೇಷ್ವಷ್ಟಮೇಶಾವಿಶುದ್ಧಿಃ॥

ಟೀ॥ ಮೃಗಶಿರ, ಪುನ, ಉತ್ತ, ಉಷಾ, ಉಭಾ, ಅಶ್ವಿನೀ, ಶ್ರವಣ,ಧನಿ ಷ್ಠಾ, ಚಿತ್ರಾ, ರೇವತಿ, ಹಸ್ತ, ಅನೂರಾಧಾ, ರೋಹಿಣಿ, ಪುಷ್ಯ, ಈ ಹದಿ ನೈದು ನಕ್ಷತ್ರಗಳಲ್ಲೂ, ಬುಧ- ಗುರು-ಶುಕ್ರ- ಸೋಮವಾರಗಳಲ್ಲೂ, ಮಾಡಬಹುದು, ಅನಧ್ಯಾಯ ತಿಥಿಗಳು, ರಿಕ್ತತಿಥಿಗಳು, ಪಿತೃದಿನಗಳು, ಶನಿ ರವಿ ಕುಜವಾರಗಳಲ್ಲೂ, ಉಪನಯನ ಮಾಡಬಾರದು ಮೇಷ, ವೃಷಭ, ಮೀನ, ಕಟಕ, ಕನ್ಯಾ, ತುಲಾ, ಮಿಥುನ, ಈ ರಾಶಿಗಳಲ್ಲೂ ಅಷ್ಟಮ ರಾ ಶಿಶುದ್ಧವಾಗಿ ಇದ್ದಾಗಲೂ ಉಪನಯನ ಮಾಡತಕ್ಕದ್ದು.

ಮೂ॥ ಕೇಂದ್ರತ್ರಿಕೋಣೋಪಗತೈಃಶುಭೈಸ್ತ್ರ್ಯಾಯಾರಿಗೈಃಪಾಪೈಃ।
ಲಗ್ನಷ್ಷಷ್ಠಾಂತ್ಯಜಾಂಹ್ಯೇನ ಚಂದ್ರೇಣಾವ್ರತವಿಶಾರಿತಂ॥

ಟೀ॥ ಶುಭಗ್ರಹಗಳಾದ ಸೋಮ, ಬುಧ, ಗುರು, ಶುಕ್ರನು, ಇವರು ಕೇಂದ್ರತ್ರಿಕೋಣಗಳಲ್ಲೂ, ರವಿ, ಕುಜ, ಶನಿಗಳು ೩-೬-೧೧ ಈ ರಾಶಿಗಳಲ್ಲೂ ಇರಬೇಕು. ಚಂದ್ರನು ೧-೬-೧೨ ರಾಶಿಗಳಲ್ಲೂ ಇರಕೂಡದು.

ಮೂ॥ಲಗ್ನಾತ್ಕೇಂದ್ರಗತೇರವೌಸ್ಫುರಜಿತಂತ್ಯಾಚಾರ್ಯಶಿಷ್ಯಾವ್ಯಪತ್ರೇಭಾ
ಮೆಕೋಜಿತನಾಮಕಂಸುಜನನೀಂ ಹಂತೆವಮಂದೇಕುಲಂ । ದೋ
ಷೋಯಂರುಧಿರಾಭಿರಸ್ತಮಸಿಚೇದುಗ್ರಾಭಿದೋಬಾಲಕಂ ರಂ
ಧ್ರಾಖ್ಯಃಪಿತರಂಧ್ವಜೇದಶನಗಷ್ಟೋತ್ಯಬ್ಧಿ ಕೇಂದ್ರಾಭಿದಾಃ॥

ಟೀ॥ ಲಗ್ನಮೊದಲು ನಾಲ್ಕು ಕೇಂದ್ರಗಳಲ್ಲಿ ಸೂರ್ಯನಿದ್ದರೆ ಸ್ಫುರಜಿತವೆಂಬ ದೋಷ ಉಂಟಾಗುತ್ತದೆಯಾಗಿ ಯಾ ದೋಷವಾಚಾರ್ಯರಿಗೆ ಹಾನಿ ಕರವು ಅವುಗಳಲ್ಲಿ ಕುಜನಿದ್ದರೆ ಕೋಜಿತವೆಂಬ ದೋಷ ಉಂಟಾಗುತ್ತದೆಯಾಗಿ ಅದು ಮಾತೃಹಾನಿ ಕರವು ಅವುಗಳಲ್ಲಿ ಶನಿ ಯಿದ್ದರೆ, ರುಧಿರ ದೋಷ ಉಂಟಾಗುತ್ತದೆ, ಅದು ವಟುವಿಗೆ ಕುಲ ಹಾನಿಕರವು. ಅಲ್ಲಿರಾಹುವಿದ್ದರೆ ಉಗ್ರದೋಷವು ಅದು ವಟುವಿಗೆ ಹಾನಿಕರವು. ಕೇತುವಿದ್ದರೆ ರಂಧ್ರ ದೋಷವು, ವಟುವಿನ ತಂದೆಗೆ ನಾಶವುಂಟಾಗುವದು. ಕೇಂದ್ರವಂದರೆ ಲಗ್ನ, ಚತುರ್ಥ, ಸಪ್ತಮ, ದಶಮ ರಾಸಿಗಳು ತ್ರಿಕೋಣಗಳಂದರೆ ೫-೯-ನೇ ರಾಶಿಗಳು

## ಕೂಟಗಳು-ದಿನಕೂಟವು.

ಮೂ॥ ಕನ್ಯಾದಿವರರುಕ್ಷಾಂತಂಗಣಯೇನ್ನವಸಂಖ್ಯಯಾ।
ಸಮಾಂತ್ಯತಾರಕಂಶ್ರೇಷ್ಠಂದಿನಕೂಟಂಪ್ರಶಸ್ಯತೇ॥

ಟೀ॥ಕನ್ಯೆಯ ನಕ್ಷತ್ರಮೊದಲು ವರನ ನಕ್ಷತ್ರದವರಿಗೆ ಒಂಭತ್ತೊಂಭತ್ತಾಗಿ ತಾರಾಬಲವಂತೆ ಎಣಿಸುವಾಗ ಅಲ್ಲಿ ೨-೪-೬-೮ ಈಸಮ ಸಂಖ್ಯೆಯುಳ್ಳ ನಕ್ಷತ್ರಗಳು ಶುಭಕರಗಳು.

## ಗಣಕೂಟವು.

ಮೂ॥ ಪುನರ್ವಸುದ್ವಯಂಸ್ವಾತಿ ಕರಶ್ರವಣತಾರಕಾಃ।
ಪೌಷ್ಣಮೈತ್ರೇಂದುದಸ್ರಾಖ್ಯಾತಾರಾದೇವಗಣಾಸ್ಮೃತಾಃ॥

ಟೀ॥ಪುನರ್ವಸು, ಪುಷ್ಯ, ಸ್ವಾತಿ, ಹಸ್ತ, ಶ್ರವಣ, ರೇವತಿ, ಅನೂರಾಧಾ, ಮೃಗಶೀರ್ಷ, ಅಶ್ವಿನೀ, ಈ ೯ ನಕ್ಷತ್ರಗಳು, ದೇವಗಣ ನಕ್ಷತ್ರಗಳು.

ಮೂ॥ರೋಹಿಣೀತ್ರೀಣಿಪೂರ್ವಾಣಿ ಭರಣೀರೌದ್ರಮೇವಚ।
ತ್ರೀಣ್ಯುತ್ತರಾಶ್ಚವಿಜ್ಞೇಯಾಃ ಮಾನುಷಾಃಪರಿಕೀರ್ತಿತಾಃ॥

ಟೀ॥ ರೋಹಿಣೀ, ಪೂರ್ವಫಲ್ಗುನೀ, ಪೂರ್ವಾಷಾಢಾ, ಪೂರ್ವಾಭಾದ್ರ, ಭ

ರಣೀ, ಆರ್ದ್ರಾ, ಉತ್ತರಫಲ್ಗುನೀ, ಉತ್ತರಾಷಾಢಾ, ಉತ್ತರಾಭಾದ್ರ, ಈ ನಕ್ಷತ್ರಗಳು ಮಾನುಷಗಣಗಳು

ಮೂ॥ ಕೃತ್ತಿಕಾಚಮಘಾಜ್ಯೇಷ್ಠಾಧನಿಷ್ಠಾಚಿತ್ರರೋಹಿಣೀ।
ವಿಶಾಖಾಶತತಾರಾಚ ಮೂಲಂರಾಕ್ಷಸಸಂಜ್ಞಕಾಃ॥

ಟೀ॥ ಕೃತ್ತಿಕಾ, ಮಘಾ, ಜ್ಯೇಷ್ಠಾ, ಧನಿಷ್ಠಾ, ಚಿತ್ರಾ, ರೋಹಿಣೀ, ವಿಶಾಖಾ, ಶತಭಿಷಕ್, ಮೂಲ, ಈ ನಕ್ಷತ್ರಗಳು, ರಾಕ್ಷಸಗಣಗಳು. ಈಗಣಗಳಲ್ಲಿ ಸ್ತ್ರೀಪುರುಷರು ಒಂದೇ ಗಣವಾಗಿದ್ದರೆ ಶುಭವು. ದೇವಮಾನುಷ ಗಣಗಳು ಮಧ್ಯಮ, ರಾಕ್ಷಸ ದೇವಗಣಗಳು ಅಧಮ, ಮಾನುಷ ರಾಕ್ಷಸಗಳು ಮೃತ್ಯುಕರವು.

## ಮಾಹೇಂದ್ರಕೂಟ.

ಮೂ॥ ವಸ್ತ್ವಾದೀರಾಂಚತುಸ್ಸಪ್ತ ದಶಮಂಚತ್ರಯೋದಶ।
ಷೋಡಶೈಕೋನವಿಂಶಶ್ಚ ದ್ವಾವಿಂಶಃಪಂಚವಿಂಶತಿಃ॥
ಏತೆಮಾಹೇಂದ್ರಯೋಗಾಸ್ಯುರ್ವಿವಾಹೆಷುಪ್ರಶಸ್ಯತೆ॥

ಟೀ॥ ಸ್ತ್ರೀನಕ್ಷತ್ರಮೊದಲು ಪುರುಷನಕ್ಷತ್ರದವರಿಗೂ ಎಣಿಸುವಾಗ ೪— ೧೦—೭—೧೩—೧೬—೧೯—೨೨—೨೫ ಈ ಅಂಕೆಗಳು ಒಂದರ ಶುಭವು.

## ಸ್ತ್ರೀದೀರ್ಘಕೂಟ

ಮೂ॥ ತ್ರಯೋದಶಚಾದೂರ್ಧ್ವಂ ಸ್ತ್ರೀದೀರ್ಘಮತಿಶೋಭನಂ॥

ಟೀ॥ ಸ್ತ್ರೀನಕ್ಷತ್ರ ಮೊದಲು ೧೩ ನಕ್ಷತ್ರದ ಮೇಲೆ ಪುರುಷ ನಕ್ಷತ್ರವಿದ್ದರೆ ಶುಭವಹುದು

## ರಾಶಿಕೂಟ.

ಮೂ॥ ದ್ವಿಕದ್ವಾದಶಗೆಮೃತ್ಯುರಾಯುರ್ದ್ವಾದಶಕೆದ್ವಿಗೆ।ತ್ರಿಕೋಣೈಕಾ
ದಶಂದುಃಖಂಸುಖಮೇಕಾದಶತ್ರಿಕಂ॥ನೀಚಂಚತುರ್ಥದಶಮಂ
ಧನಂದಶಚತುರ್ಥಕೆ।ಶುಭಂಚಪಂಚನವಮಮಶುಭಂನವಪಂ
ಚಕಂ।ಷಷ್ಠಾಷ್ಟಕೆಪುತ್ರನಾಶಃಪುತ್ರಲಾಭೋಷ್ಟಷಷ್ಠಕೆ।ಸಮ
ಸಪ್ತೆತು ಮಾಂಗಲ್ಯಂದಂಪತ್ಯೋಃ ಪ್ರೀತಿವರ್ಧನಂ॥

ಟೀ॥ ಸ್ತ್ರೀರಾಶಿಮೊದಲು ೨, ಪುರುಷರಾಶಿ ಮೊದಲು ೧೨ ಇದ್ದರೆ ಮೃತ್ಯುವನ್ನು ಕೊಡುತ್ತದೆ ಸ್ತ್ರೀರಾಶ್ಯಾದಿ ೧೨, ಪುರುಷರಾಶ್ಯಾದಿ ೨ ಆದರೆ ಆಯುರ್ವೃದ್ಧಿ, ಸ್ತ್ರೀರಾಶ್ಯಾದಿ ೩ ಪುರುಷರಾಶ್ಯಾದಿ ೧೧ ಇದ್ದರೆ ದುಃಖವು, ಸ್ತ್ರೀರಾಶ್ಯಾದಿ ೧೧, ಪುರುಷರಾಶ್ಯಾದಿ ೩ ಇದ್ದರೆ ಸುಖವು, ಸ್ತ್ರೀರಾಶ್ಯಾದಿ ೪ ಪುರುಷರಾಶ್ಯಾದಿ ೧೦ ಇದ್ದರೆ ತ್ಯಾಜ್ಯವು, ಸ್ತ್ರೀರಾಶ್ಯಾದಿ ೧೦ ಪುರುಷ ರಾಶ್ಯಾದಿ ೪ ಇದ್ದರೆ ಧನಪ್ರಾಪ್ತಿ, ಸ್ತ್ರೀರಾಶ್ಯಾದಿ ೫ ಪುರುಷರಾಶ್ಯಾದಿ ೯ ಇದ್ದ

ರೆ ಶುಭವು, ಸ್ತ್ರೀರಾಶ್ಯಾದಿ ೯ ಪುರುಷರಾಶ್ಯಾದಿ ೫ ಇದ್ದರೆ ಅಶುಭವು, ಸ್ತ್ರೀ ರಾಶ್ಯಾದಿ ೬, ಪುರುಷ ರಾಶ್ಯಾದಿ ೪ ಇದ್ದರೆ ಪುತ್ರನಾಶವು, ಸ್ತ್ರೀರಾಶ್ಯಾದಿ ೪, ಪುರುಷ ರಾಶ್ಯಾದಿ ೬ ಇದ್ದರೆ ಪುತ್ರಲಾಭವು, ಸ್ತ್ರೀರಾಶ್ಯಾದಿ ೭, ಪುರುಷ ರಾಶ್ಯಾದಿ ೭ ಇದ್ದರೆ ಮಾಂಗಲ್ಯಾಭಿವೃದ್ಧಿಯೆಂದು ತಿಳಿಯುವದು.

ರಜ್ಜು ಕೂಟವು.

ಮೂ॥ ಅಶ್ವಿನೀಸಾರ್ಪಮಘಾಜ್ಯೇಷ್ಠಾ ಮೂಲಾಂತ್ಯಂ ಪಾದರಜ್ಜುಕಃ । ಯಮಾರ್ಯಭಾಗ್ಯಮೈತ್ರಾಖ್ಯಂ ಅಹಿರ್ಬುಧ್ನ್ಯಕಟೀರಿತಾ॥ ಅಗ್ನ್ಯಾದಿತ್ಯಾರ್ಯಮೋಶೋಪರ್ವಾಣಿ ವಿಶ್ವಪ್ರೋಷ್ಠಪದೋದರೇ। ಬಹ್ವೀರುದ್ರೇಶ್ವರಸ್ವಾತೀಶ್ರವಣಂವಾರುಣಂತಥಾ॥ ಕಂಠದೇಶೇವಿಜಾನೀಯಾದ್ವಸುಚಿತ್ರೇಂದುಮಸ್ತಕಂ। ಮುಖಿಪತಿಂಗಳಿತ್ಯನ್ಯಂ ಕುಷ್ಠಾಸಸ್ಯಾತ್ತ್ರಜಾಂಹರತಿ। ವರಿದ್ರತಾಭವೇತ್ಕಟ್ಯಾಂ ಪಾದೇಷಾಭ್ರಮಣಂತಥಾ॥

ಟೀ॥ ಅ, ಆಶ್ಲೇ, ಮ, ಜ್ಯೇ, ಮೂ, ರೇ, ಈ ೬ ಪಾದ ರಜ್ಜು ನಕ್ಷತ್ರಗಳು. ಭ, ಪುಷ್ಯ, ಪೂಫ, ಅನೂ, ಪೂಷಾ, ಉಭಾ, ಈ ೬ ನ್ನು ಕಟಿರಜ್ಜು ನಕ್ಷತ್ರಗಳು ಕೃ, ಪುನ, ಉತ್ತರ, ವಿ, ಉಷಾ, ಪೂಭಾ, ಈ ೬ ನ್ನು ಉದರರಜ್ಜು ನಕ್ಷತ್ರಗಳು. ರೋಹಿಣೀ, ಆರ್ದ್ರಾ, ಹ, ಸ್ವಾ, ಶ್ರ, ಶತ ಈ ೬ ನ್ನು ಕಂಠರಜ್ಜು ನಕ್ಷತ್ರಗಳು. ಮೃ, ಚಿ, ಧ, ಈ ೩ ನ್ನು ಶಿರೋರಜ್ಜು ನಕ್ಷತ್ರಗಳು. ಇವುಗಳಿಗೆ ಫಲವು, ಶಿರೋರಜ್ಜು ಪತಿಯನ್ನು ಕೊಲ್ಲುತ್ತದೆ ಕಂಠರಜ್ಜು ಸ್ತ್ರೀಗೆ ನಾಶಕರವು, ಉದರ ರಜ್ಜು ಮಕ್ಕಳಿಗೆ ಹಾನಿ, ಕಟಿರಜ್ಜು ದಾರಿದ್ರ್ಯವನ್ನುಂಟು ಮಾಡುತ್ತದೆ. ಪಾದರಜ್ಜು ಆ ಸ್ತ್ರೀಪುರುಷರಿಗೆ ಒಂದು ಕಡೆ ನಲೆಯಿಲ್ಲದೆ ತಿರಿಗಿಸುತ್ತಲಿರುತ್ತದೆ.

ನಾಡೀ ಕೂಟ

ಮೂ॥ ಅಶ್ವಿನ್ಯಾರ್ದ್ರಾಪುನರ್ವಸ್ವುತ್ತರಾಹಸ್ತಜ್ಯೇಷ್ಠಭಂ। ಮೂಲಾ ವಾರುಣತೋಯಶ್ಚ ಪಾರ್ಶ್ವನಾಡೀನವಸ್ತಥಾ॥

ಟೀ॥ ಅ, ಆರ್ದ್ರಾ, ಪುನ, ಉತ್ತರ, ಹ, ಜ್ಯೇ, ಮೂ, ಶತ, ಪೂಭಾ, ಈ ೯ ನ್ನು ಪ್ರಥಮ ಪಾರ್ಶ್ವ ನಾಡೀ ನಕ್ಷತ್ರಗಳು.

ಮನುಷ್ಯನಾಡೀ ಕೂಟ

ಮೂ॥ ಭರಣೀಂದುಗುರುಭಾಗ್ಯಂ ಚಿತ್ರಾನೂರಾಧಪೂರ್ವಜಂ। ಶ್ರವಿಷ್ಠಾಚೋತ್ತರಾಭಾದ್ರ ಮಧ್ಯನಾಡೀನವಸ್ತಥಾ॥

ಟೀ॥ ಭ, ಮೃ, ಪುಷ್ಯ, ಪುಫ, ಚಿ, ಅನೂ, ಪೂಷಾ, ಧ, ಉಭಾ, ಈ ೯ ಮಧ್ಯೇಕನಾಡೀ ನಕ್ಷತ್ರಗಳು.

ಮೂ॥ ಕೃತ್ತಿಕಾವಿಧಿಸಾರ್ಪಾಶ್ಲೇಷಪಿತ್ರ್ಯಸ್ವಾತಿವಿಶಾಖಭಂ । ಉತ್ತರಾಷಾ

ಧನಿಷ್ಠ ಪ್ರಷ್ಠರ್ಗಲಾಂತ್ಯಾನಾಡೀತುಪಾರ್ಶ್ವಗೇ ॥

ಟೀ॥ ಕೃ, ರೊ, ಆಶ್ಲೆ, ಮ, ಸ್ವಾ, ವಿ, ಉಷಾ, ಶ್ರ, ರೇ, ಈ ೯ ದ್ವಿತೀಯ, ಪಾರ್ಶ್ವನಾಡೀ ನಕ್ಷತ್ರಗಳು. ಇದಕ್ಕೆ ಫಲವು

ಮೂ॥ ಏಕನಾಡೀಪತಿಂಹಂತಿ ಪಾರ್ಶ್ವಗಾಡೀತುಕನ್ಯಕಾಂ॥

ಟೀ॥ ದಂಪತಿಗಳ ನಕ್ಷತ್ರಗಳು ಮಧ್ಯನಾಡೀ ನಕ್ಷತ್ರಗಳಲ್ಲಿದ್ದರೆ ಪುರುಷನಿಗೆ ಹಾನಿಕರವು, ಪಾರ್ಶ್ವನಾಡಿಗಳಲ್ಲಿದ್ದರೆ ಸ್ತ್ರೀಗೆ ನಾಶಕರವು.

ವಶ್ಯಕೂಟ.

ಮೂ॥ ಸಿಂಹಾಳಿಕರ್ಕೀವಣಿಜೌಕನ್ಯಾವೃಶ್ಚಿಕಕಾರ್ಮುಕೌ। ತುಲಾ
ಮೀನಯುಮೌನಕ್ರಕನ್ಯಾಕರ್ಕಟಕಸ್ತ್ರಿಮಿಃ । ಮೇಷಕುಂಭಾ
ವೃಷೋನಕ್ರಮೇಷಾದೇರ್ವಶ್ಯರಾಶಯಃ ॥

ಟೀ॥ ಮೇಷರಾಶಿಗೆ ಸಿಂಹ ವೃಶ್ಚಿಕಗಳು, ವೃಷಭಕ್ಕೆ ಕರ್ಕಾಟಕ ತುಲೆಗಳು, ಮಿಥುನಕ್ಕೆ ಕನ್ಯಾರಾಶಿಯು, ಕಟಕಕ್ಕೆ ವೃಶ್ಚಿಕ ಧನಸ್ಸುಗಳು, ಸಿಂಹಕ್ಕೆ ತುಲೆಯು, ಕನ್ಯರಾಶಿಗೆ ಮೀನಮಿಥುನಗಳು, ತುಲಾರಾಶಿಗೆ ಮಕರ ಕನ್ಯೆಗಳು, ವೃಶ್ಚಿಕರಾಸಿಗೆ ಕಟಕವು, ಧನೂರಾಶಿಗೆ ಮೀನ ರಾಶಿಯು, ಮಕರರ ಶಿಗೆ ಮೇಷ ಕುಂಭಗಳು, ಕುಂಭರಾಶಿಗೆ ಮೇಷರಾಶಿಯು, ಮೀನರಾಶಿಗೆ ಮಕರವು ಈ ಮೇರೆ ಇವುಗಳು ವಶ್ಯಗಳೆಂದು ತಿಳಿಯುವದು,

ವರ್ಣಕೂಟವು.

ಮೂ॥ ಕರ್ಕ್ಯಂತೆವೃಶ್ಚಿಕೇವಿಪ್ರಾಃಕ್ಷತ್ರ್ಯಾಸಿಂಹಧನುಸ್ತುಲಾ ॥ ಮೇಷೆ
ಯುಗ್ಮಘಟಾಃವೈಶ್ಯಾಶೂದ್ರೋವೃಷಮೃಗಾಂಗನಾಃ॥

ಟೀ॥ ಕರ್ಕಟ, ಮೀನ, ವೃಶ್ಚಿಕ, ಈ ೩ ರಾಶಿಗಳು ಬ್ರಹ್ಮಜಾತಿ, ಸಿಂಹ, ಧನುಸ್ಸು, ತುಲಾ ಈ ೩ ನ್ನು ಕ್ಷತ್ರಿಯಜಾತಿ, ಮೇಷ, ಮಿಥುನ, ಕುಂಭ, ಈ ೩ನ್ನು ವೈಶ್ಯಜಾತಿ, ವೃಷಭ, ಮಕರ, ಕನ್ಯಾ, ಈ ಮೂರುನ್ನು ಶೂದ್ರಜಾತಿ, ಈ ರಾಶಿಗಳಲ್ಲಿ ಸ್ತ್ರೀಪುರುಷರು ಏಕಜಾತಿಯಾಗಿರುವದುತ್ತಮ.

ಯೋನಿಕೂಟವು.

ಮೂ॥ ಅಶ್ವಂಗಜಮಜಂಸರ್ಪಂಸರ್ಪಿಣೀಶುನಮಾರ್ಜರೀ । ಅಜಾಮಾ
ರ್ಜಾಲಮೂಷಶ್ಚಮೂಷಿಕಾವೃಷವಾಹಿಷೀ॥ ವ್ಯಾಘ್ರಶ್ಚಮಹಿ
ಷೋವ್ಯಾಘ್ರೀಮೃಗೀಮೃದಶುನಃಕಪಿಃ । ಗೋಷಂಡೋವಾನರೀ
ಸಿಂಹೀತುರಗೀಸಿಂಹಗೋಗಜೀ ॥

ಟೀ॥ ಅಶ್ವಿನಿಗೆ ಯೋನಿಯು ಕುದುರೆ, ಭರಣಿಗೆ ಆನೆಯು, ಕೃತ್ತಿಕೆಗೆಮೇಕೆ, ರೋಹಿಣಿಗೆ ಸರ್ಪವು, ಮೃಗಶಿರಕ್ಕೆ ಹೆಂಣುಹಾವು, ಆದ್ರ್ರಗೆ ನಾಯಿ, ಪುನರ್ವಸುವಿಗೆ ಹೆಂಣು ಬೆಕ್ಕು, ಪುಷ್ಯಕ್ಕೆ ಹೆಂಣು ಮೇಕೆಯು, ಆಶ್ರೇಷ

ಕ್ಕೆ ಗಂಡುಬೆಕ್ಕು, ಮಖಕ್ಕೆ ಇಲಿಯು, ಹುಬ್ಬೆಗೆ ಹೆಣ್ಣಿಲಿ ಉತ್ತರೆಗೆ ಯೆತ್ತು, ಹಸ್ತಕ್ಕೆ ಯೆಮ್ಮೆಯು, ಚಿತ್ರೆಗೆ ಹುಲಿಯು, ಸ್ವಾತಿಗೆ ಕೋಣ, ವಿಶಾಖೆಗೆ ಹೆಣ್ಣುಹುಲಿ, ಅನೂರಾಧಕ್ಕೆ ಹೆಣ್ಣು ಹುಲ್ಲೆಯು, ಜ್ಯೇಷ್ಠೆಗೆ ಗಂಡುಹುಲ್ಲೆಯು, ಮೂಲಕ್ಕೆ ಹೆಣ್ಣು ನಾಯಿ, ಪೂರ್ವಾಷಾಢೆಗೆ ಕಪಿಯು, ಉತ್ತರಾಷಾಢೆಗೆ ಮುಂಗಿಸಿ, ಶ್ರವಣಕ್ಕೆ ಹೆಣ್ಣು ಕೋತಿ, ಧನಿಷ್ಠೆಗೆ ಹೆಣ್ಣು ಸಿಂಹವು, ಶತಭಿಷಗೆ ಹೆಣ್ಣು ಕುದುರೆಯು, ಪೂರ್ವಾಭಾದ್ರೆಗೆ ಗಂಡುಸಿಂಹವು, ಉತ್ತರಾಭಾದ್ರೆಗೆ ಹಸುವು, ರೇವತಿಗೆ ಹೆಣ್ಣಾನೆಯು, ಈ ಮೇರೆ ನಕ್ಷತ್ರಗಳಿಗೆ ಯೋನಿಗಳನ್ನು ತಿಳಿಯುವದು ಇವುಗಳಲ್ಲಿ ದಂಪತಿಗಳ ನಕ್ಷತ್ರಗಳು ವೈರವುಳ್ಳಯೋನಿಗಳಾದರೆ ವೈರಉಂಟಾಗುವದು. ವೈರ ವರ್ಗವಲ್ಲವಿದ್ದರೆ ಶುಭವು, ಒಂದೇ ಯೋನಿಯಾಗಿದ್ದರೆ ಸರ್ವೋತ್ತಮವೆಂದು ತಿಳಿಯಬೇಕು,

### ವಿವಾಹಕ್ಕೆ ಯೋಗ್ಯಗಳಾದ ಮಾಸಗಳು.

ಮೂ॥ ಮಾಘಫಾಲ್ಗುಣವೈಶಾಖಜ್ಯೇಷ್ಠಮಾಸಾಃ ಶುಭಪ್ರದಾಃ। ಮಧ್ಯ
ಮಂಕಾರ್ತಿಕೆಮಾರ್ಗಶೀರ್ಷೇಪ್ಯನಿಂದಿತಾಃಪರೆ॥

ಟೀ॥ ಮಾಘ, ಫಾಲ್ಗುನ, ವೈಶಾಖ, ಜ್ಯೇಷ್ಠ, ಈ ೪ ತಿಂಗಳು ಉತ್ತಮಗಳು, ಕಾರ್ತಿಕ, ಮಾರ್ಗಶಿರ, ಈ ೨ ಮಾಸಗಳು ಮಧ್ಯಮಗಳು, ಕಡಮೆ ಮಾಸಗಳು ಅಧಮಕಳು.

### ನಕ್ಷತ್ರಗಳು.

ಮೂ॥ ಮೂಲಮೈತ್ರಮೃಗರೋಹಿಣೀಕರೈಃಪೌಷ್ಣಮಾರುತಮಘೋತ್ತರಾ
ನ್ವಿತೈಃ।ರರ್ಯವದ್ಭಿರುಡುಭಿರ್ಮೃಗೇಂದ್ರಕಾಂಪರಾಣಿಪೀಡನವಿಧಿರ್ವಿಧೀಯತೆ॥

ಟೀ॥ ಮೂ, ಅನೂ, ಮೃಗ, ರೋ, ಹ, ರೇ, ಸ್ವಾ, ಮ, ಉಫ, ಉಷಾ, ಉಭಾ, ಈ ೧೧ನ್ನು ವಿವಾಹಕ್ಕೆ ಶ್ರೇಷ್ಠನಕ್ಷತ್ರಗಳು.

ಮೂ॥ ಶುಭೈಕ್ಷಿತಯುತಾಸ್ತ್ನಸ್ತುಉದ್ವಾಹೆಮಿಲರಾಶಯಃ। ಶುಭಷಡ್ವ
ರ್ಗಕೆಲಗ್ನೆಮಹಾದೋಷವಿವರ್ಜಿತೆ॥

ಟೀ॥ ಲಗ್ನದಲ್ಲಿ ಶುಭಗ್ರಹಗಳಿದ್ದರೂ ನೋಡಿದರೂ ಶುಭಕರವು ಶುಭಷಡ್ವರ್ಗವು, ಲಗ್ನಕ್ಕೆ ಮಹಾದೋಷಗಳಿಲ್ಲದಿರುವಿಕೆಯು ಇವೆಲ್ಲ ಶುಭಪ್ರದವು.

### ಲಗ್ನಬಲವು.

ಮೂ॥ ಶುಕ್ರಃಪಂಚಸಹಸ್ರಾಣಿಬುಧಃಪಂಚಶತಾನಿಚ। ಲಕ್ಷಮೇಕಂ
ತುದೋಷಾಣಾಂಗುರುಃಕೆಂದ್ರೇವ್ಯಪೋಹತು॥

ಟೀ॥ ಶುಕ್ರನುವಿವಾಹಲಗ್ನ ಕೇಂದ್ರಗಳಲ್ಲಿದ್ದರೆ ೫ ಸಾವಿರದೋಷಗಳನ್ನು ಹರಿಸುತ್ತಾರೆ. ಬುಧನು ಲಗ್ನಾದಿಕೇಂದ್ರಗಳಲ್ಲಿ ಇದ್ದರೆ ೫ ನೂರು ದೋಷಗಳನ್ನು ಹರಿಸುತ್ತಾನೆ. ಗುರುವು ಲಗ್ನಾದಿ ಕೇಂದ್ರಗಳಲ್ಲಿದ್ದರೆ ಲಕ್ಷ

ದೋಷಗಳನ್ನು ಹರಿಸುತ್ತಾನೆ.

ಮೂ॥ ಶುಕ್ರೋಗುರುರ್ವಾಪಿ ಬುಧೋಪಿವಾಯಸ್ಯಲಗ್ನಕೇಂದ್ರತ್ರಿಕೋಣಗೆ । ನ ಶ್ಯಂತಿಸಕಲಾಃ ದೋಷಾಃ ಪಾಪಾನೀವಹರಿಸ್ಮೃತಃ॥

ಟೀ॥ ಶು, ಗು, ಬುಧರು ವಿವಾಹ ಲಗ್ನಕ್ಕೆ ಕೇಂದ್ರ ತ್ರಿಕೋಣಗಳಲ್ಲಿದ್ದರೆ ಹರಿಸ್ಮರಣೆಯುಸರ್ವಪಾಪಗಳನ್ನು ಹರಿಸುವಂದದಿ ಅವರುಗಳು ಸಕಲ ದೋಷಗಳನ್ನು ಹರಿಸುವರು.

ವಿವಾಹಕ್ಕೆ ಅಯೋಗ್ಯ ತಿಥಿಗಳು.

ಮೂ॥ ಮಾಸಾಂತೇಪಂಚದಿವಸಾಃ ತ್ಯಾಜ್ಯಾರಿಕ್ತಾಮವಮಾಷ್ಟಮೀ । ಷ ಷ್ಟೀಂಚಪರಿಘಾರ್ಧಂ ವ್ಯತೀಪಾತಸವೈಧೃತಿಂ॥

ಟೀ॥ ಮಾಸಾಂತ್ಯದಲ್ಲಿ ೫ ತಿಥಿಗಳು, ರಿಕ್ತತಿಥಿಗಳು, ಅಮಾವಾಸ್ಯೆ, ಅಷ್ಟಮಿ, ಷಷ್ಟಿ, ಪರಿಘಾಯೋಗದ ಪೂರ್ವಭಾಗವು, ವ್ಯತೀಪಾತ, ವೈಧೃತಿ,ಇವುಗಳಲ್ಲಿ ವಿವಾಹವನ್ನು ಮಾಡಕೂಡದು

ಮೂ॥ ಜಾಮಿತ್ರಾದ್ಯೇಕವಿಂಶಶ್ಚ ಮಹಾದೋಷಾವಿವರ್ಜಿತಂ॥

ಟೀ॥ ಸಪ್ತಮಶುದ್ಧಿ ಇಲ್ಲದ್ದು ಮೊದಲಾದ ಇಪ್ಪತ್ತೊಂದು ಮಹಾ ದೋಷಗಳನ್ನು ಅವಶ್ಯ ಬಿಡತಕ್ಕದ್ದು,

ಸ್ತ್ರೀಗೆ ಗೃಹ ಪ್ರವೇಶ.

ಮೂ॥ ವಿವಾಹಮಾರಭ್ಯವಧೂಪ್ರವೇಶೋಯುಗ್ಮೇತಿಥೌಷೋಡಶವಾಸ ರಾಂತೇ। ಪಂಚಾಂಗಶುದ್ಧಿಶ್ಚ ದಿನಂ ವಿನಾಪಿತಿಥೌನಸದೋಷಕರಂಗೆ ಪಿಕಾರ್ಯಃ॥

ಟೀ॥ ವಿವಾಹದ ದಿನ ಮೊದಲು ೧೬ ದಿನಗಳಲ್ಲಿ ಸಮದಿನಗಳಲ್ಲಿ ಸ್ತ್ರೀಗೆ ಗೃಹಪ್ರವೇಶ ಮಾಡತಕ್ಕದ್ದು ಈ ದಿನಗಳಲ್ಲಿ ದೋಷಗಳಿದ್ದರೂ ಮಾಡಬಹುದೆಂದು ಮುನಿಗಳು ಹೇಳಿದರು-

ಋತುಕಾಲ ನಿರ್ಣಯವು

ಮೂ॥ಕರಾದಿಪಂಚೋತ್ತರಮೂಲಪೌಷ್ಣ ವಿಷ್ಣುತ್ರಯಾಶ್ವಿಜ್ಯವಿಧಿಂದುಭೇಷು ಆದ್ಯಂಕಜಸ್ಸೌಖ್ಯಸುತಾಯುರರ್ಥ ಸೌಭಾಗ್ಯವೃದ್ಧಿಂಕುರುತೆಂಗನಾನಾಂ

ಟೀ॥ ಹ, ಚಿ, ಸ್ವಾ,ವಿ, ಅನೂ, ಉತ್ತ, ಉಷಾ, ಉಭಾ, ಮೂ, ರೆ, ಶ್ರ, ಧ, ಶತ, ಅ, ರೋ, ಮೃ, ಪು, ಈ ನಕ್ಷತ್ರಗಳಲ್ಲಿ ಕನ್ಯೆಯು ಮೊದಲು ಋತುವಾದರೆ ಸೌಖ್ಯ, ಸಂತಾನ ಆಯುಸ್ಸು, ಧನಲಾಭ, ಸೌಭಾಗ್ಯ,ಯಶೋವೃದ್ಧಿ, ಇವುಗಳುಂಟಾಗುವವು.

ವರ್ಜ್ಯ ತಿಥಿಗಳು

ಮೂ॥ ಅಮಾರಿಕ್ತಾಚಷಷ್ಟೀಚದ್ವಾದಶೀವ್ರತಪರ್ವಸು ।ಪರಿಘಸ್ಯಚ

ಪೂರ್ವಾರ್ಧೆವ್ಯತೀಪಾತೇಚವೈಧೃತೌ । ಸಂಧ್ಯೋರುಪ್ಲವವಿ
ಷ್ಟ್ಯಾಮಶುಭಂಪ್ರಥಮಾರ್ತವಂ॥

ಟೀ॥ ೪-೬-೮-೯-೧೨-೧೪-೧೫-೩೦-ಈ ತಿಥಿಗಳು, ಪರಿಘಾಪೂರ್ವಾರ್ಧವು ವ್ಯತೀಪಾತ ವೈಧೃತಿಗಳು ಭದ್ರಾಕರಣವು, ಸಂಧ್ಯಾಕಾಲವು, ಸೂರ್ಯ ಚಂದ್ರಗ್ರಹಣಗಳು, ಇವುಗಳಲ್ಲಿ ಮೊದಲು ಮುಟ್ಟುವಾಗಕೂಡದು.

ಮೂ॥ ಬುಧಶುಕ್ರೇಂದುಜೀವಾನಾಂವಾರೇಷುಶುಭದಂಭವೇತ್ । ಶುಭಾ
ನಾಮಂಶಕಂಶ್ರೇಷ್ಟಮಾರ್ತವೇಪ್ರಥಮೇಶುಭಂ॥

ಟೀ॥ ಬು, ಶು, ಚಂ, ಗು, ಇವರುಗಳ ವಾರಗಳು ರಾಸಿಗಳು, ಅಂಶಗಳು ಇವುಗಳೆಲ್ಲವೂ ಶುಭಕರಗಳು

## ನಿಷೇಕ ಕಾಲ.

ಮೂ॥ ವಿಷ್ಣುಪ್ರಜೇಶರವಿಮಿತ್ರಸಮೀರಪೌಷ್ಣ ಮೂಲೋತ್ತರಾವರು
ಣಭಾನಿನಿಷೇಕಕಾರ್ಯೇ। ಪೂಜ್ಯಾನಿಪುಷ್ಯವಸುಶೀತಕರಾಶ್ವಿಚಿತ್ರಾ
ದಿತ್ಯಾಶ್ಚಮಧ್ಯಮಫಲಾವಿಫಲಾಸ್ಯುರನ್ಯೇ॥

ಟೀ॥ ಶ್ರ, ರೋ, ಹ, ಅನೂ, ಸ್ವಾ, ರೇ, ಮೂ, ಉತ್ತ, ಉಭಾ, ಶತ ಈ ನಕ್ಷತ್ರಗಳು ನಿಷೇಕಕ್ಕೆ ಯೋಗ್ಯಗಳು ಪುಷ್ಯ, ಧ, ಮೃ, ಅಶ್ವಿ, ಚಿ, ಪುನ, ಈ ನಕ್ಷತ್ರಗಳು ಮಧ್ಯಮಗಳು. ಉಳಿದ ನಕ್ಷತ್ರಗಳು ಅಧಮಗಳು.

ಮೂ ॥ಷಷ್ಠ್ಯಷ್ಟಮೀಂಪಂಚದಶೀಂಚತುರ್ಥೀಂಚತುರ್ದಶೀಮಪ್ಯುಭಯತ್ರಹಿ
ತ್ವಾ।ಶೇಷಾಶ್ಯುಭಾಸ್ಯುಸ್ತಿಥಯೋನಿಷೇಕೇವಾರಾಶ್ಚಶಾಂಕಾದ್ಯಸಿತೇಂದುಹೀನಾ

ಟೀ॥ ೪-೬-೮-೧೪-೧೫-೩೦ ಈ ತಿಥಿಗಳನ್ನು ಬಿಟ್ಟು ಕಡಮೆತಿಥಿಗಳಲ್ಲಿಯು, ಸೋಮ, ಬುಧ,ಗುರು,ಶುಕ್ರವಾರಗಳಲ್ಲಿಯು ನಿಷೇಕವು ಶುಭಕರವು

ಮೂಲ॥ವೃಷಭಮಿಥುನಕರ್ಕಿಸಿಂಹಕನ್ಯಾತುಲಘಟಚಾಪಝಷಾಶ್ಚಭಾವ
ಹ್ಯತಿ।ಯದಿಶುಭಫಲಶಾಲಿನೋನುಕೂಲೇನಿಧನವಿಶುದ್ಧಿಯುತೇನಿಷೇಕಕಾರ್ಯೇ॥

ಟೀ॥ ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ಕುಂಭ, ಧನುಸ್ಸು, ಮೀನ, ಈ ರಾಸಿಗಳು ಶುಭಗ್ರಹಗಳು. ಇವುಗಳು ಕೇಂದ್ರಾದಿಸ್ಥಾನಗಳಲ್ಲಿ ಬಲವಂತರಾಗಿ ಕೂಡಿಯಿರುವಾಗಲು ಅಷ್ಟಮಶುದ್ಧಿ ಇರುವಾಗಲು ನಿಷೇಕಮಾಡುವದು ಒಳ್ಳೇದು.

## ಪುಂಸವನ ಕಾಲವು.

ಮೂ॥ ಕುರ್ಯಾತ್ಪುಂಸವನಂಪ್ರಸಿದ್ಧವಿಷಯೇಮಾಸೇತೃತೀಯೇಥವಾಪ
ರ್ಯಸ್ತ್ರಷ್ಟತನೌತುಷಾರಕಿರಣೇಪುಷ್ಯೇಥವಾವೈಷ್ಣವೇ । ಹಿತ್ವಾಕರ್ಕಟ
ಕಸಯುಗ್ಮಮಖಿಲೇಷ್ವಸ್ತ್ಯಸ್ಯರಿಕ್ತೇತಿಥೌಶುದ್ಧೇಸ್ಯೈಧನಧಾಮ್ನಿ ಶುಕ್ರಕ
ಶಭೃದ್ವಿಗ್ನಾಂತ್ರಿಣಾಂವಾಸರೇ॥

ಟೀ॥ ಪುಂಸವನವು ಪ್ರಸಿದ್ಧವಾದ ಮೂರನೇ ತಿಂಗಳಲ್ಲಿ ಮಾಡತಕ್ಕದ್ದು. ಅಥವಾ ಗರ್ಭವು ಸ್ಪಷ್ಟವಾಗಿ ತಿಳಿಕೆ ತರುವಾಯಲಾಗಲು ಮಾಡತಕ್ಕದ್ದು. ಮತ್ತು ಪ್ಯ, ಪುಸ್ಯ, ಈ ೨ ನಕ್ಷತ್ರಗಳಲ್ಲಿಯೂ, ಅಥವಾ ಶ್ರವಣ ನಕ್ಷತ್ರದಲ್ಲಿ ಮಾಡಬಹುದು, ಕರ್ಕಾಟಕ, ಕನ್ಯಾ, ಮಿಥುನ ರಾಶಿಗಳಲ್ಲಿಯು, ರಿಕ್ತತಿಥಿಗಳನ್ನು ಬಿಟ್ಟು ಅಷ್ಟಮಶುದ್ಧಿ ಇರುವಾಗಲು, ಶುಕ್ರ, ಸೋಮ, ಬುಧ, ಗುರುವಾರಗಳಲ್ಲಯು ಪುಂಸವನ ಮಾಡುವದು ಒಳ್ಳೆದು.

### ಸೀಮಂತ ಕಾಲವು.

ಮೂ॥ ಚತುರ್ಥಷಷ್ಠಾಷ್ಟಮರೂಪಿಭಾಜಿಸ್ಯಾದ್ಗರ್ಭಂಪ್ರಥಮಂವಿದೇಷಾಂ । ಸೀಮಂತಕರ್ಮದ್ವಿಜಭಾಮಿನೀನಾಂಮಾಸೇಷ್ಟಮೇವಿಷ್ಣುಬಲಿಂಚಕುರ್ಯಾತ್॥

ಟೀ॥ ಬ್ರಾಹ್ಮಣ ಸ್ತ್ರೀಯರಿಗೆ ಪ್ರಥಮ ಗರ್ಭವು ಪ್ರಕಾಶವಾಗಿ ತಿಳಿಯಬರುವಾಗ ೪-೬-೮ ಈ ತಿಂಗಳುಗಳಲ್ಲಿ ಸೀಮಂತವು ಮಾಡತಕ್ಕದ್ದು. ೮ನೇ ತಿಂಗಳಲ್ಲಿ ವಿಷ್ಣುಬಲಿಯನ್ನೂ ಮಾಡತಕ್ಕದ್ದು.

ಮೂ॥ ಸೀಮಂತೇತಿಷ್ಯಹಸ್ತಾದಿತಿಹರಿಶಶಭೃತ್ಪೌಷ್ಣವಿದ್ಯುತ್ತರಾಖ್ಯಾಃ ಪಕ್ಷಚ್ಛಿದ್ರಾಂಚರಿಕ್ತಾಂಪಿತೃತಿಥಿಮಸಹಾಯಾಪರೇಸ್ಯುಃಪ್ರಶಸ್ತಾಃ।ಸಿಂಹಾಳೀವರ್ಜಯಿತ್ವಾಶುಭಫಲಬಹುಳಾರಾಶಯೋಷ್ಟಂಶುಕಾನಿಶ್ರೇಷ್ಠಾಸ್ಯೈಶ್ಚೇತರೇಽಚೇಭ್ಯಗುಬುಧಧಿಷಣಾನಾಂವಿಶುದ್ಧೇಷ್ಟಮೇಪಿ॥

ಟೀ॥ಸೀಮಂತದಲ್ಲಿ ಪುಷ್ಯ, ಹ, ಪುನ, ಶ್ರ, ಮೃ, ರೇ, ರೋ, ಉತ್ತ, ಉಷಾ, ಉಭಾ, ಈ ನಕ್ಷತ್ರಗಳು ಮುಖ್ಯವಾದವು ಪಕ್ಷಚ್ಛಿದ್ರಗಳು, ರಿಕ್ತತಿಥಿಗಳು, ಪಿತೃತಿಥಿಗಳು, ಸಿಂಹ, ವೃಶ್ಚಿಕ ರಾಶಿಗಳು, ಇವುಗಳನ್ನು ಬಿಟ್ಟು ಮಿಕ್ಕಾದ ರಾಶ್ಯಂಶಗಳಲ್ಲಿಯು, ತಿಥಿಗಳಲ್ಲಿಯು ಸೋಮ, ಬುಧ, ಗುರು, ಶುಕ್ರರು ಪ್ರಬಲವಾಗಿರುವಾಗಲು,ಅಷ್ಟಮಶುದ್ಧಿ ಇರುವಾಗಲುಸೀಮಂತವು ಶುಭಕರವು.

### ಯಾತ್ರಾಪ್ರಕರಣವು—ತಿಥಿಶೂಲಗಳು.

ಮೂ॥ಪ್ರತಿಪನ್ನವಮೀಪೂರ್ವೈದ್ವಿತೀಯೈಕಾದಶೀತ್ತರೇ । ತೃತೀಯೈಕಾದಶೀಯಾಗ್ನೇಚತುರ್ದ್ವಾದಶಸ್ಯೈಋತೌ॥ ಪಂಚತ್ರಯೋದಶೀಯಾಮ್ಯೇ ಜಲೇಷಷ್ಟೀಚತುರ್ದಶೀ॥ ಸಪ್ತಮೀಪೂರ್ಣವಾಯುವ್ಯಾಂಅಮಾವಾಸ್ಯಾಷ್ಟಮೀಶಯೋಃ॥

ಟೀ॥೧-೯ ಈ ತಿಥಿಗಳಲ್ಲಿ ಪೂರ್ವದಿಕ್ಕಿಗು, ೨-೧೦ ಗಳಲ್ಲಿ ಉತ್ತರದಿಕ್ಕಿಗು, ೩-೧೧ಗಳಲ್ಲಿಆಗ್ನೇಯಕ್ಕು, ೪-೧೨ ನಿರುಋುತಿದಿಕ್ಕಿಗು, ೫-೧೩ಗಳಲ್ಲಿ ದಕ್ಷಿಣದಿಕ್ಕು, ೬-೧೪ ಗಳಲ್ಲಿ ಪಶ್ಚಿಮಕ್ಕು, ೭-೧೫ ಗಳಲ್ಲಿ ವಾಯುವ್ಯಕ್ಕು, ೩೦-೮-ಗಳಲ್ಲಿ ಈಶಾನ್ಯಕ್ಕು ಹೋಗಕೂಡದು. ಇವೇ ತಿಥಿಶೂಲಗಳು

## ವಾರಶೂಲಗಳು.

ಶ್ಲೊ॥ನಪೂರ್ವೆಶನಿಸೋಮೇಚನಗುರುರ್ದಕ್ಷಿಣಸ್ತಥಾ । ನಪಶ್ಚಾದ್ಭಾನುಶುಕ್ರೇಚನೋತ್ತರೆಬುಧಮಂಗಳೆ॥

ಟೀ॥ಶನಿಸೋಮವಾರಗಳಲ್ಲಿ ಪೂರ್ವದಿಕ್ಕಿಗು, ಗುರುವಾರದಲ್ಲಿ ದಕ್ಷಿಣಕ್ಕು, ಆದಿತ್ಯ ಶುಕ್ರವಾರಗಳಲ್ಲಿ ಪಶ್ಚಿಮಕ್ಕು. ಮಂಗಳ ಬುಧವಾರಗಳಲ್ಲಿ ಉತ್ತರಕ್ಕು ಪ್ರಯಾಣ ಮಾಡಬಾರದು.

## ಪ್ರಯಾಣಕ್ಕೆ ಮುಖ್ಯ ನಕ್ಷತ್ರಗಳು.

ಮೂ॥ ಮೃಗಾಶ್ವಿನೀಪುಷ್ಯಪುನರ್ವಸೂಚಹಸ್ತಾನುರಾಧಾಶ್ರವಣಂಚಮೂಲಾ।ಧನಿಷ್ಟರೆವತ್ಯಗತೆಪ್ರಯಾಣೆಫಲಂಲಭೆಚ್ಛೀಘ್ರನಿವರ್ತನಂಚ॥

ಟೀ॥ ಮೃ, ಅಶ್ವಿ, ಪುಷ್ಯ, ಪುನ, ಹ, ಅನೂ, ಮೂ, ಧ, ರೇ, ಈ ನಕ್ಷತ್ರಗಳು ಪ್ರಯಾಣದಲ್ಲಿ ವಳ್ಳೇ ಶುಭಪಲಗಳನ್ನು ಕೊಡುವದು.

## ಯೋಗಿನಿ.

ಮೂ॥ಶತಮಖಿಂದುಹುತಾಶನರಕ್ಷಸಾಯುಮಜಲೆಶಸಮೀರಣಶೂಲಿನಾ॥ ದಿವಿಭುವಿಕ್ರಮಶಃಪರಿವರ್ತತೆಸಿತತಿಥಿಪ್ರಥಮಾದಿಷುಯೋಗಿನೀ ॥

ಟೀ॥ ಶು ೧—೧೦ ಬ ೬, ಈ ತಿಥಿಗಳಲ್ಲಿ ಪೂರ್ವದಿಕ್ಕಿನಲ್ಲಿಯು, ಶು ೨—೧೨ ಬ೭, ಇವುಗಳಲ್ಲಿ ಉತ್ತರದಿಕ್ಕಿನಲ್ಲಿಯು, ಶು ೩—೧೩—ಬ ೮ಲ್ಲು ಆಗ್ನೇಯದಲ್ಲಿಯು, ಶು ೪—೧೪, ಬ ೯ ಲ್ಲು ನಿರುಋುತಿ ದಿಕ್ಕಿನಲ್ಲಿಯು, ಶು ೫—೧೫ ಬ ೧೦ ರಲ್ಲು, ದಕ್ಷಿಣದಲ್ಲಿಯು, ಶು ೬ ಬ ೧—೩೦ ಲ್ಲು ಪಶ್ಚಿಮದಲ್ಲಿಯು, ಶು ೭—ಬ—೨—೧೨ ಲ್ಲುವಾಯುವ್ಯದಲ್ಲಿಯು, ಶು—೮—ಬ—೩—೧೩ಲ್ಲು ಈಶಾನ್ಯದಲ್ಲಿಯು, ಶು—೯ ಬ—೪—೧೪ಲ್ಲು ಆಕಾಶದಲ್ಲಿಯು, ಶು ೧೦—ಬ೫—೩೦ಲ್ಲು ಭೂಮಿಯಲ್ಲಿಯೂ ಯೋಗಿನಿ ಇರುವದ್ದರಿಂದ ಆಯಾ ತಿಥಿಗಳಲ್ಲಿ ಆಯಾ ದಿಕ್ಕುಗಳಿಗೆ ಯಾತ್ರೆ ಹೋಗಕೂಡದು.

ಶ್ಲೊ॥ಅಜಾಳಿಕನ್ಯಾಘಟಕೇಟಭೇಷುಯಾತಾಂನರೋಯಃಕುರುತೆಸ್ತಮೃತ್ಯುಃ॥

ಟೀ॥ಮೇಷ, ಸಿಂಹ, ಕನ್ಯೆ, ವೃಶ್ಚಿಕ, ಕುಂಭ, ಈ ರಾಶಿಗಳಲ್ಲಿ ಪ್ರಯಾಣ ಮಾಡುವವರಿಗೆ ಅನಿಷ್ಟ ಸಂಭವಿಸುವದು.

## ನರಿಕೂಗು, ಶೀನು, ದನಗಳಶೀನು, ಇವುಗಳಿಗೆ ಫಲವು.

ಮೂ ॥ ಪ್ರಾಗಾದ್ಯಾಶನಿವಾಸರಾದಿಗದಿತಾಃಸೂರ್ಯೋದಯೆಷ್ಟಾಗ್ರಹಾಃನಾಗಾನಾಗಾನಗಾನಿಧೀನಿಶಿನಭೋಸಾದೂನಗೋನಾಡಿಕಾಃ । ಹಾಸಿಪ್ರೀತಿದುರುಕ್ತಿಬಂಧುಕನಕಸ್ತ್ರಿಗ್ಧಾನ್ನತಾಪಾರ್ತಿದಾಃ । ಕ್ರೊತ್ತುಃಕ್ರೊಷ್ಟುರುತೆಕ್ಷುತೆಫಲಮಿದಂಮೃತ್ಯುಸ್ಸದಾಗೋಕ್ಷುತಂ॥

ಟೀ ॥ ಶನಿವಾರ ಹಗಲು ೩೦ಘಳಿಗೆ ಮೂಡಲ ದಿಕ್ಕಿನಲ್ಲಿಯು ಆರಾತ್ರಿ ೩೦ ಘಳಿಗೆ ಆಗ್ನೇಯದಲ್ಲೂ, ಆದಿತ್ಯವಾರ ಹಗಲು ೩೦ ಘಳಿಗೆ ದಕ್ಷಿಣ ದಿಕ್ಕಿನಲ್ಲಿಯು, ಆ ರಾತ್ರಿ ೩೦ ಘಳಿಗೆ ಸೋಮವಾರದಲ್ಲಿ ೬೦ ಘಳಿಗೆ, ಅಂತು ೯೦ಘಳಿಗೆ ನಿರುಋುತಿ ದಿಕ್ಕಿನಲ್ಲಿಯು, ಮಂಗಳವಾರ ಹಗಲು ೩೦ ರಾತ್ರಿ ೨೦ ಅಂತು ೫೦ ಘಳಿಗೆ ಪಶ್ಚಿಮದಲ್ಲೂ, ಆ ರಾತ್ರಿ ಉಳಿದ ೧೦ ಘಳಿಗೆಯು, ಬುಧವಾರ ಹಗಲು ೩೦ ಘಳಿಗೆ, ಅಂತು ೪೦ ಘಳಿಗೆ ವಾಯುವ್ಯದಲ್ಲೂ, ಬುಧವಾರ ರಾತ್ರಿ ೩೦ ಘಳಿಗೆ, ಬೃಹಸ್ಪತಿವಾರದಲ್ಲಿ ೫೦ ಅಂತು ೮೦ ಘಳಿಗೆ ವರಿಗೂ ಉತ್ತರದಲ್ಲೂ, ಆ ರಾತ್ರಿಯಲ್ಲಿ ಉಳಿದ ೧೦ ಘಳಿಗೆಯು ಶುಕ್ರವಾರ ೬೦ ಘಳಿಗೆಯು, ಅಂತು ೭೦ ಘಳಿಗೆ ಈಶಾನ್ಯದಲ್ಲೂ, ಸೂರ್ಯನುಮೊದಲು ರಾಹುವೆರಿಗೆ ೮ ಗ್ರಹಗಳು ವಾಸಮಾಡುತ್ತಾರೆ. ನರಿಕೂಗು ಶೀನು, ದನಗಳ ಸೀನು, ಇವುಗಳು ಈ ವಾರಗಳಲ್ಲಿ ರಾಜನಿರುವ ದಿಕ್ಕಿನಲ್ಲಿ ಯಾದರೆ ಹಾನಿ ಕರವು ಅದಕ್ಕೆ ಫಲವು, ೨ನೇದಿಕ್ಕಿನಲ್ಲಿ ವಿಶ್ವಾಸವು, ೩ನೇ ದಿಕ್ಕಿನಲ್ಲಿ ಕೆಟ್ಟಮಾತು, ೪ನೇ ದಿಕ್ಕಿನಲ್ಲಿ ಬಂಧು ಲಾಭವು ೫ನೇ ದಿಕ್ಕಿನಲ್ಲಿ ಸ್ವರ್ಣಲಾಭವು, ೬ನೇ ದಿಕ್ಕಿನಲ್ಲಿ ಭೋಜನ ಸೌಖ್ಯವು, ೭ನೇದಿಕ್ಕಿನಲ್ಲಿ ವ್ಯಸನವು ೮ನೇ ದಿಕ್ಕಿನಲ್ಲಿ ಪೀಡೆಯು, ಈ ಮೇರೆ ಕ್ರಮವಾಗಿ ಫಲಗಳನ್ನು ತಿಳಿಯತಕ್ಕದ್ದು.

ಮುಹೂರ್ತ ದೀಪಿಕೆಯು ಸಂಪೂರ್ಣವಾದುದು.

---

ಶ್ರೀರಸ್ತು.

## ಮುಹೂರ್ತದರ್ಪಣವು

ಶ್ಲೋ ॥ ಯಶ್ಚೈಷಸ್ಸತತಂಸಹಸ್ರಫಣವಾನೇಕೇನಮೂರ್ಧ್ನಾರ್ಣವಹಃ।
ಬ್ರಹ್ಮಾಂಡಾನಿಬಹೂನಿಪಂಕಜದಳಪ್ರಾಯೇಣನಿಭ್ರಾಜತೆ।
ತಂಶೇಷಂದಧತಂಸ್ವವಾಮಚರಣೆಸಂನೂಪುರಾಭಂಮುದಾ।
ತಾರ್ಕ್ಷ್ಯಾರ್ಗೋಪರಿಸಂಸ್ಥಿತಂಸುರಯುತಂಶ್ರೀವೆಂಕಟೇಶಂಭಜೆ॥

ಮೂ॥ ತ್ರಿಮೂರ್ತಿರೂಪಿಣಂದೇವಂ ತ್ರಯೀವೇದ್ಯಂಶುಭಪ್ರದಂ।
ತ್ರಿಗುಣಾತೀತಮವ್ಯಕ್ತಂ ವಂದೇಸೂರ್ಯಂಸದಾವಿಭುಂ।
ನಾರದೇನಕೃತಂಯಚ್ಚ ಮುಹೂರ್ತಾಹ್ವಯ ದರ್ಪಣಂ।
ತಟ್ಟೀಕಾಂಪ್ರಾರಭೆಬಾಲ ಬೋಧಾಯಸ್ವಮನೋಹರಾಂ॥

ಟೀ॥ ತ್ರಿಮೂರ್ತಿಸ್ವರೂಪನಾಗಿಯು, ವೇದವೇದ್ಯನಾಗಿಯು, ಶುಭಪ್ರದನಾಗಿಯು, ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳನ್ನು ಮೀರಿದವನಾಗಿಯು, ಸೂಕ್ಷ್ಮರೂಪನಾಗಿಯೂ ಇರುವ ಸೂರ್ಯದೇವರನ್ನು ಯಾ

ಪಾಗ್ಯೋ ವಂದಿಸುತ್ತೇನೆಂಬದಾಗಿ ಈ ಕವಿಯು ಗ್ರಂಥಾದಿಯಲ್ಲಿ ಇಷ್ಟ ದೇವತಾ ನಮಸ್ಕಾರ ರೂಪವಾದ ಮಂಗಳವನ್ನು ರಚಿಸಿದನು. ಪೂರ್ವ ಕಾಲದಲ್ಲಿ ನಾರದರಿಂದ ಮಾಡಲ್ಪಟ್ಟ ಮುಹೂರ್ತದರ್ಪಣವೆಂಬ ಗ್ರಂಥವನ್ನು ಬಾಲಕರು ಸುಲಭವಾಗಿ ತಿಳಿಯತಕ್ಕ ಬಗ್ಯೆ ಅದಕ್ಕೆ ಟೀಕೆಯನ್ನು ಮಾಡುತ್ತೇನೆ.

## ನಾಮ ನಕ್ಷತ್ರಗಳ ಕ್ರಮವು॥

ಮೂ॥ಚೂಚೇಚೋಲಾಸ್ತ್ವಶ್ವಿನ್ಯಃಲೀಲೂಲೇಲೋಭರಣ್ಯಪಿ। ಆಈಊಏಕೃತ್ತಿಕಾಃಚಓವಾವೀವೂಚರೋಹಿಣೀ। ವೇವೋಕಾಕೀಮೃಗಶಿರಃಕೂಘಂಙಛಾಚಾರ್ದ್ರಕಂ।ಕೇಕೋಹಾಹೀಪುನರ್ವಸ್ವಃಹೂಹೇಹೋಡಾಃಚಪುಷ್ಯಭಂ। ಡೀಡೂಡೇಡೋಚಆಶ್ಲೇಷಾಮಾಮೀಮೂಮೇಮಖಾತಥಾ।ಮೋಟಾಟೀಟೂಪೂರ್ವಭಂಚಟೇಟೋಪಾಪೀತುಚಾರ್ಯಭಂ। ಪೂಷಣಾಠಾಃಚಹಸ್ತಸ್ಸ್ಯಾತ್ಪೇಪೋರಾರೀಚಚಿತ್ತಭಂ।ರೂರೇರೋತಾವಾಯುಋಕ್ಷಂತೀತೂತೇತೋವಿಶಾಖಭಂ। ನಾನೀನೂನೇಚಮಿತ್ರರ್ಕ್ಷಂನೋಯಾಯೀಯೂತುಚೈಂದ್ರಭಂ। ಯೇಯೋಭಾಭೀಚಮೂಲರ್ಕ್ಷಂಭೂಧಾಫಾಢಾಃಚತೋಯಭಂ।ಭೇಭೋಜಾಜೀಚವಿಶ್ವೇಚಜೂಜೇಜೋಖಾಚವಿಷ್ಣುಭಂ।ಗಾಗೀಗೂಗೇವಾಸವಂಚಗೋಸಾಸೀಸೂಚವಾರುಣಂ।ಸೇಸೋದಾದೀಪ್ರೋಷ್ಠಭೇಚ ದುಶ್ಝಂಥಾಹಿರ್ಬುಧ್ನಭೇ।ದೇದೋಚಾಚೀಚಪೌಷ್ಣೇಚಯಿತ್ಯೇತಾನಾಮತಾರಕಾಃ॥

ಟೀ॥ ಮನುಷ್ಯರಿಗೆ ಜನ್ಮನಕ್ಷತ್ರಗಳು ತಿಳಿಯದೆ ಇದ್ದರೆ ಅವರುಗಳ ಹೆಸರಿನ ಮೊದಲನೇ ಅಕ್ಷರದಿಂದ ಅವರ ನಕ್ಷತ್ರವನ್ನು ತಿಳಿದುಕೊಳ್ಳುವ ಕ್ರಮವೆಂತೆನೆ,—ಚೂಚೇಚೋಲಾ ಅಶ್ವಿನೀ ಅಂದರೆ ಈ ನಾಲ್ಕು ಅಕ್ಷರಗಳಿಗೂ ಅಶ್ವಿನೀ ನಕ್ಷತ್ರ, ಹ್ಯಾಗಂದರೆ,-ಚುಕ್ಕಾ, ಚೂಡಾರ್ಜ ಎಂಬ ಹೆಸರುಳ್ಳವನಿಗೆ ಅಶ್ವಿನೀ ೧ನೇ ಪಾದವಾಗುತ್ತದೆ. ಚೆನ್ನಾ ಯೆಂಬ ಹೆಸರುಳ್ಳವನಿಗೆ ಅಶ್ವಿನೀ ೨ನೇ ಪಾದ, ಚೊಕ್ಕಾ ಯೆಂಬ ಹೆಸರುಳ್ಳವನಿಗೆ ಅಶ್ವಿನೀ ೩ನೇ ಪಾದ, ಲಕ್ಷ್ಮಣಾಯೆಂಬ ಹೆಸರುಳ್ಳವನಿಗೆ ಅಶ್ವಿನೀ ೪ನೇ ಪಾದ, ಈ ಮೇರಿಗೆ ೨೭ ನಕ್ಷತ್ರಗಳಿಗೂ ನಕ್ಷತ್ರ ೧ಕ್ಕೆ ನಾಲ್ಕು ಅಕ್ಷರಗಳ ಮೇರೆ ತಿಳಿಯತಕ್ಕದ್ದು. ಚೂಚೇಚೋಲಾ ಅಶ್ವಿನೀ, ಲೀಲೂಲೇಲೋ ಭರಣೀ, ಆ ಈ ಊ ಏ ಕೃತ್ತಿಕಾ, ಓವಾವೀವೂ ರೋಹಿಣೀ, ವೇವೋಕಾಕೀ ಮೃಗಶಿರ, ಕೂಘಂಙಛಾ ಆರ್ದ್ರಾ, ಕೇಕೋಹಾಹೀ ಪುನರ್ವಸು, ಹೂಹೇಹೋಡಾ ಪುಷ್ಯಮಿ, ಡೀಡೂಡೇಡೋ ಆಶ್ಲೇಷ, ಮಾಮೀಮೂಮೇ ಮಖ, ಮೋಟಾಟೀಟೂ ಪುಬ್ಬ, ಟೇಟೋಪಾಪೀ ಉತ್ತರ, ಪೂಷಣಾಠಾ ಹಸ್ತ, ಪೇಪೋರಾರೀ ಚಿತ್ತ, ರೂರೇರೋತಾ ಸ್ವಾತಿ, ತೀತೂತೇತೋ ವಿಶಾಖ, ನಾನೀನೂನೇ ಅನೂರಾಧ, ನೋಯಾಯೀಯೂ ಜ್ಯೇಷ್ಠ, ಯೇಯೋಭಾಭೀ ಮೂ

ಲ, ಬೂಧಾಬಾಢಾ ಪೂರ್ವಾಷಾಢ, ಬೇಬೋಜಾಜೀ ಉತ್ತರಾಷಾಢ, ಜಾ ಜೇಜೋಘಾಶ್ರವಣಂ, ಗಾಗೀಗೂಗೆ ಧನಿಷ್ಠ, ಗೋಸಾಸೀಸೂ ಶತಭಿಷಕ್, ಸೇಸೋದಾದೀ ಪೂರ್ವಾಭಾದ್ರ, ದುಶ್ಯಂಚಾಥಾ ಉತ್ತರಾಭಾದ್ರ, ದೇದೊ ಚಾಚೀ ರೇವತೀ, ಈ ಪ್ರಕಾರವಾಗಿ ತಿಳಿದು ಕೊಳ್ಳತಕ್ಕದ್ದು.

ಸಂಯುಕ್ತಾಕ್ಷರಗಳುಳ್ಳ ನಾಮ ಗಳಿಗೆ ನಕ್ಷತ್ರಗಳನ್ನು ತಿಳಿಸುವ
ಗ್ರಂಥಾಂತರ ಉದಾಹರಣೆಗಳು.

ಮೂ॥ಕೃಷ್ಣೋಹೃಷ್ಣಶ್ರೀಧರಃಕ್ಷೇತ್ರಪಾಲೋಜ್ಞಾನೋಭೀಮೋಭೈರವ
ಕ್ಷೆತಿನಾಮ್ನಾಂ। ಇಂದುರ್ಸ್ವಾಯುಸ್ತ್ವಷ್ಟೃಹಸ್ತಾರ್ದ್ರಪುಷ್ಯಾಃ
ಪೂರ್ವಾಷಾಢಾಃಚೈತಿಮುಖ್ಯಾಣಿಸಪ್ತ॥

ಟೀ॥ ಕೃಷ್ಣನೆಂಬ ಹೆಸರಿಗೆ ಮೃಗಶಿರಾ ನಕ್ಷತ್ರವು, ಅದರ ೩ನೇಪಾದವು. ಹೃಷ್ಣನೆಂಬ ಹೆಸರಿಗೆ ಸ್ವಾತೀ ನಕ್ಷತ್ರವು, ಅದರ ೧ನೇ ಪಾದವು ಶ್ರೀಧರ ನೆಂಬ ಹೆಸರಿಗೆ ಹಸ್ತನಕ್ಷತ್ರವು, ಅದರ ೪ ನೇ ಪಾದವು. ಕ್ಷೇತ್ರಪಾಲಕ ನೆಂಬ ಹೆಸರಿಗೆ ಹಸ್ತನಕ್ಷತ್ರವು, ಅದರ ೨ನೇ ಪಾದವು, ಜ್ಞಾನನೆಂಬ ಹೆಸ ರಿಗೆ ಆರ್ದ್ರಾನಕ್ಷತ್ರವು, ಅದರ ೩ನೇ ಪಾದವು. ಭೀಮನೆಂಬ ಹೆಸರಿಗೆ ಪು ಷ್ಯನಕ್ಷತ್ರವು, ಅದರ ೩ನೇ ಪಾದವು, ಭೈರವನೆಂಬ ಹೆಸರಿಗೆಪೂರ್ವಾಷಾಢಾ ನಕ್ಷತ್ರವು, ಅದರ ೩ನೇ ಪಾದವೆಂಬದಾಗಿ ತಿಳಿದುಕೊಳ್ಳಬೇಕು. ಈ ಕ್ರ ಮವು ಅವಕಹಡಾದಿ ಚಕ್ರದಲ್ಲಿ ಹೇಳಲ್ಪಟ್ಟಧೆ.

ತರುವಾಯ ನಕ್ಷತ್ರಗಳ ಕ್ಷಿಪ್ರ, ದಾರುಣ, ಮೃದು, ಸ್ಥಿರ, ಉಗ್ರ,ಸಾಧಾ ರಣ, ಚರ ಯೆಂಬ ಸಂಜ್ಞೆಯನ್ನು ತಿಳಿಸುತ್ತಾನೆ.

ಮೂ॥ಕ್ಷಿಪ್ರಂದಸ್ರರವಿಜ್ಯಪೂಸುರಶಿವಜ್ಯೇಷ್ಠೋರಗಂದಾರುಣಂ।ಚಿತ್ರಾಂ
ತ್ಯೇಂದುಭಮೈತ್ರಭಂಮೃದುಭವೇದ್ಬ್ರಾಹ್ಮೋತ್ತರಾಭಂಸ್ಥಿರಂ॥ಉ
ಗ್ರಂಕಾಲಮುಖಾತ್ರಿಪೂರ್ವಮನಲೇಂದ್ರಾಗ್ನೀತುಸಾಧಾರಣಂ।ಸ್ವಾತ್ಯಾ
ದಿತ್ಯಹರಿತ್ರಯಂಚರಮಿದಂದದ್ಯಾತ್ಸ್ವಸಂಜ್ಞಾಫಲಂ॥

ಟೀ॥ ಅಶ್ವಿ, ಹಸ್ತ, ಪುಷ್ಯ, ಈ ೩ ಕ್ಷಿಪ್ರನಕ್ಷತ್ರಗಳು. ಅಂದರೆ,ಶೀಘ್ರವಾ ದವುಗಳು. ಮೂ, ಆರ್ದ್ರ, ಜ್ಯೇಷ್ಠ, ಆಶ್ರೇಷ, ಈ ೪ದಾರುಣ ನಕ್ಷತ್ರಗ ಳು. ಅಂದರೆ, ಕ್ರೂರಗಳು. ಚಿತ್ತ, ರೇ, ಮೃ,ಅನೂ, ಈ ೪ ಮೃದುನಕ್ಷತ್ರ ಗಳು. ರೋ, ಉತ್ತ, ಉಷಾ, ಉಭಾ, ಈ ೪ ಸ್ಥಿರ ನಕ್ಷತ್ರಗಳು. ಭ,ಮ ಖ, ಹುಬ್ಬೆ, ಪೂಷಾ, ಪೂಭಾ, ಈ ೫ ಉಗ್ರ ನಕ್ಷತ್ರಗಳು. ಕೃ, ವಿ, ಈ ೨ ಸಾಧಾರಣ ನಕ್ಷತ್ರಗಳು. ಸ್ವಾ, ಪುನ,ಶ್ರ,ಧ, ಶತ ಈ ೫ಚರ ನಕ್ಷತ್ರ ಗಳು ಇಲ್ಲಿ ಹೇಳಲ್ಪಟ್ಟ ಸಂಜ್ಞೆಗಳ ಮೇರೆ ನಕ್ಷತ್ರಗಳು ಫಲವನ್ನು ಕೊ ಡುತ್ತವೆ. ಅಂದರೆ, ಕ್ಷಿಪ್ರನಕ್ಷತ್ರಗಳು ಶೀಘ್ರಫಲವನ್ನು, ದಾರುಣನಕ್ಷತ್ರ

ಗಳು ಕ್ರೂರಫಲವನ್ನೂ, ಮೃದು ನಕ್ಷತ್ರಗಳು ಮೃದುಫಲವನ್ನೂ, ಸ್ಥಿರ ನಕ್ಷತ್ರಗಳು ಸ್ಥಿರಫಲವನ್ನೂ, ಉಗ್ರನಕ್ಷತ್ರಗಳುಗ್ರಫಲವನ್ನೂ, ಸಾಧಾರಣ ನಕ್ಷತ್ರಗಳು ಸಾಮಾನ್ಯ ಫಲವನ್ನು, ಚರ ನಕ್ಷತ್ರಗಳು ಚಂಚಲ ಫಲವನ್ನು ಕೊಡುತ್ತವೆಂದು ತಾತ್ಪರ್ಯವು.

ತರುವಾಯ ನಕ್ಷತ್ರಗಳ ಅಧಿಪತಿಗಳನ್ನು ಹೇಳುತ್ತಾನೆ.

ಮೂ॥ ಮುಕ್ಷೇಶಾಅಥದಸ್ರಕಾಲಹುತಭುಗ್ಬ್ರಹ್ಮೇಂದುರುದ್ರಾದಿತಿ|ಜ್ಯಾನಾ
ಗಾಃಪಿತರೋಭಗಾರ್ಯಮರವಿತ್ವಷ್ಟ್ರಾಶುಗಾಖ್ಯಾಃಕ್ರಮಾತ್|ಇಂ
ದ್ರಾಗ್ನೀಅಪಿಮಿತ್ರಶಕ್ರದನುಜಾಸ್ತೋಯಾಖ್ಯವಿಶ್ವಾತ್ಮಭೂ|ಶ್ರೀ
ಶಾಖ್ಯಾವಸುತೋಯಪಾಜಚರಣಾಹಿರ್ಬುಧ್ನ್ಯಪೂಷಾಹ್ವಯಾಃ ॥

ಟೀ॥ ಅಶ್ವಿನಿಗೆ ಅಶ್ವಿನೀದೇವತೆಗಳು, ಭರಣಿಗೆ ಯಮಧರ್ಮ ರಾಯನು, ಕೃತ್ತಿಕೆಗೆ ಅಗ್ನಿಯು, ರೋಹಿಣಿಗೆ ಬ್ರಹ್ಮದೇವನು, ಮೃಗಶಿರಕ್ಕೆ ಚಂದ್ರನು, ಆರ್ದ್ರೆಗೆ ಶಿವನು, ಪುನರ್ವಸುವಿಗೆ ಅದಿತಿದೇವಿಯು, ಪುಷ್ಯಕ್ಕೆ ಬೃಹಸ್ಪತಿಯು, ಆಶ್ಲೇಷಕ್ಕೆ ಆದಿಶೇಷನು, ಮಖೆಗೆ ಪಿತೃದೇವತೆಗಳು, ಹುಬ್ಬೆಗೆ ಭಗನೆಂಬ ಸೂರ್ಯಮೂರ್ತಿಯು, ಉತ್ತರೆಗೆ ಅರ್ಯಮನೆಂಬ ಒಂದು ಸೂರ್ಯಮೂರ್ತಿಯು, ಹಸ್ತಕ್ಕೆ ಸೂರ್ಯನು, ಚಿತ್ತೆಗೆ ಇಂದ್ರನು, ಸ್ವಾತಿಗೆ ವಾಯುವು, ವಿಶಾಖೆಗೆ ಇಂದ್ರಾಗ್ನಿಗಳು, ಅನೂರಾಧೆಗೆ ಮಿತ್ರನೆಂಬ ಸೂರ್ಯ ಮೂರ್ತಿಯು, ಜ್ಯೇಷ್ಠೆಗೆ ದೇವೇಂದ್ರನು, ಮೂಲಕ್ಕೆ ನಿರ್ಋತಿಯು, ಪೂರ್ವಾಷಾಢಗೆ ಉದಕವು, ಉತ್ತರಾಷಾಢಗೆ ವಿಶ್ವೇದೇವರು, ಅಭಿಜಿತ್ತಿಗೆ ಬ್ರಹ್ಮನು, ಶ್ರವಣಕ್ಕೆ ವಿಷ್ಣುವು, ಧನಿಷ್ಠೆಗೆ ಅಷ್ಟವಸುಗಳು, ಶತಭಿಷಕ್ಕೆ ವರುಣನು, ಪೂರ್ವಾಭಾದ್ರೆಗೆ ಅಜೈಕಚರಣನು, ಉತ್ತರಾಭಾದ್ರೆಗೆ ಅಹಿರ್ಬುಧ್ನ್ಯನು, ರೇವತಿಗೆ ಪೂಷನೆಂಬ ಸೂರ್ಯಮೂರ್ತಿಯು, ಎಂಬದಾಗಿ ಈ ಮೇಲೆ ಕ್ರಮದಿಂದ ೨೮ ನಕ್ಷತ್ರಗಳಿಗೆ ೨೮ ದೇವತೆಗಳೆಂದು ತಿಳಿಯುವದು. ಇಲ್ಲಿ ಹೇಳಲ್ಪಟ್ಟ ಸೂರ್ಯನ ಮೂರ್ತಿಗಳು ದ್ವಾದಶಾದಿತ್ಯರಲ್ಲಿ ಸೇರಿದವರೆಂದು ತಿಳಿಯಬೇಕು.

ಅಂಧಕಾದಿ ನಕ್ಷತ್ರಗಳು

ಮೂ॥ ಅರ್ಕಸ್ಥಿತರ್ಕ್ಷಾದಿಚದುರ್ಭಿರಂಧಾಃಷಡ್ಭಿರ್ದ್ವಿನೇತ್ರಾಸವಮೈಕನೇತ್ರಾಃ।
ನೇತ್ರಾಣಿಯುಗ್ಮಾಣಿತಥೈವಪಂಚತ್ರೀಣ್ಯಾಹುರಂಧಾಃಕ್ರಮಶಃಫಲಾನಿ॥

ಟೀ॥ ಸೂರ್ಯನಿರುವನಕ್ಷತ್ರ ಮೊದಲು ೪ ನಕ್ಷತ್ರಗಳು ಕುರುಡು ನಕ್ಷತ್ರಗಳು, ತರುವಾಯ ೬ ನಕ್ಷತ್ರಗಳು ಯೆರಡುಗಣ್ಣುಳ್ಳವು, ತರುವಾಯ ೯ ನಕ್ಷತ್ರಗಳು ಒಂದು ಕಣ್ಣುಳ್ಳವು, ತರುವಾಯ ೫ ನಕ್ಷತ್ರಗಳು ಹಾಗೆಯೇ ಯೆರಡು ಕಣ್ಣುಳ್ಳವು, ತರುವಾಯ ೩ ನಕ್ಷತ್ರಗಳು ಕುರುಡು ನಕ್ಷತ್ರಗಳು, ಈ ನಕ್ಷತ್ರಗಳು, ತಮ್ಮ ತಮ್ಮ ಸ್ವಭಾವ ಫಲಗಳನ್ನು ಕೊಡುವವು.

## ಜೀವನಿರ್ಜೀವ ನಕ್ಷತ್ರಗಳು

ಮೂ॥ಅರ್ಕೇಣಮುಕ್ತಸ್ತ್ರಿತಗಮ್ಯತಾರಾಸ್ತಿಸ್ರೋಮೃತಾಸ್ಸಪ್ತತುಚಾ
ರ್ಧಜೀವಾಃ । ಏಕೋನ್ಮೃತೋಷ್ಟೌಚಸುಪೂರ್ಣಜೀವಾ ಏಕೋಮೃತ
ಸ್ಸಪ್ತಮುಪಾದಜೀವಾಃ ॥

ಟೀ॥ ಸೂರ್ಯನು ಯಾವನಕ್ಷತ್ರವನ್ನು ಬಿಟ್ಟು ಯಾವ ನಕ್ಷತ್ರದಲ್ಲಿಯಿದ್ದುಕೊಂಡು,ಯಾವನಕ್ಷತ್ರಕ್ಕೆ ಹೋಗುವನಾಗಿ ಇದ್ದಾನೋ ಆ ೩ನಕ್ಷತ್ರಗಳು ಮೃತ ನಕ್ಷತ್ರಗಳು, ಅದರಮೇಲೆ ೭ನಕ್ಷತ್ರ ಅರ್ಧಜೀವಗಳು, ತರುವಾಯ ಒಂದುನಕ್ಷತ್ರ ನಿರ್ಜೀವನಕ್ಷತ್ರವು, ತರುವಾಯ ೮ನಕ್ಷತ್ರಗಳು ಸಂಪೂರ್ಣ ಜೀವವುಳ್ಳವು. ತರುವಾಯ ಒಂದು ನಿರ್ಜೀವ ನಕ್ಷತ್ರವು, ತರುವಾಯ ೭ನಕ್ಷತ್ರಗಳು ಪಾದಜೀವನಕ್ಷತ್ರಗಳು, ಅಂದರೆ–ಸೂರ್ಯನು ಭರಣೀನಕ್ಷತ್ರದಲ್ಲಿ ಇರುವಾಗ ಅಶ್ವಿನೀ, ಭ, ಕೃ, ಈ ಮೂರು ಮೃತನಕ್ಷತ್ರಗಳು, ತರುವಾಯ ರೋ, ಮೃ, ಆದ್ರಾ, ಪುನ, ಪುಷ್ಯ, ಆಶ್ಲೇ, ಮಖ ಈ ೭ನಕ್ಷತ್ರಗಳು ಅರ್ಧಜೀವನಕ್ಷತ್ರಗಳು, ಹುಬ್ಬನಕ್ಷತ್ರವು, ಮೃತನಿರ್ಜೀವನಕ್ಷತ್ರವು ಉತ್ತರ, ಹಸ್ತ, ಚಿ, ಸ್ವಾ, ವಿಶಾ, ಅನೂ, ಜ್ಯೇ, ಮೂ, ಈ ೮ನಕ್ಷತ್ರಗಳು ಪೂರ್ಣ ಜೀವ ನಕ್ಷತ್ರಗಳು,ಪೂಷಾ ನಕ್ಷತ್ರವು ನಿರ್ಜೀವನಕ್ಷತ್ರವು,ತರುವಾಯ, ಉಷಾ, ಶ್ರ, ಧ, ಶತ, ಪೂಭಾ, ಉಭಾ, ರೇ, ಈ ೭ನಕ್ಷತ್ರಗಳು ಪಾದಜೀವ ನಕ್ಷತ್ರಗಳೆಂದು ತಿಳಿಯತಕ್ಕದ್ದು.

## ನಕ್ಷತ್ರತ್ಯಾಜ್ಯ ಘಟಿಕಾ ಪ್ರಮಾಣಗಳು.

ಮೂ ॥ ಪಕ್ಷಾಜಿನಾಶ್ವ್ಯಮಗುಣಾಃಖವೇದಾಶ್ಚಕ್ರಾಃಕುದಸ್ರಾಃಖಗು
ಣಾನಖಾಶ್ಚ । ದಂತಾಃಖರಾಮಾಶ್ಚನಖಾಃಪುರಾಣಾಭೂರ್ಬಾ
ಹವೋವ್ಯೋಮಕರಾಸ್ತುಶಕ್ರಾಃ॥ಇಂದ್ರಾದಿಶೋದುಕ್ಷ್ವ್ಯವನೋರ
ಸಾಕ್ಷಾಜೀವಾನಖಾದಿಗ್ದ್ವಶನಾಗಚಂದ್ರಾಃ। ನೃಪಾಕ್ಷಸಿದ್ಧಾಃಖ
ಗುಣಾವಿಷಾಖ್ಯಾನಾಡ್ಯಶ್ಚತಸ್ರಸ್ತದುಪರ್ಯಥೆಸ್ಸ್ಯಾತ್॥

ಟೀ॥ಅಶ್ವಿನಿಗೆ೫೦,ಭರಣಿಗೆ ೨೪,ಕೃತ್ತಿಕೆಗೆ ೩೦,ರೋಹಿಣಿಗೆ೪೦,ಮೃಗಶಿರಕ್ಕೆ ೧೪,ಆರ್ದ್ರಗೆ ೨೧, ಪುನರ್ವಸುಗೆ ೩೦,ಪುಷ್ಯಕ್ಕೆ೨೦,ಅಶ್ಲೇಷಕ್ಕೆ ೩೨ ಮಖಗೆ ೩೦,ಹುಬ್ಬೆಗೆ೨೦,ಉತ್ತರಕ್ಕೆ೧೮,ಹಸ್ತಕ್ಕೆ೨೧,ಚಿತ್ತೆಗೆ೨೦,ಸ್ವಾತಿಗೆ೧೪, ವಿಶಾಖೆಗೆ೧೪,ಅನೂರಾಧಗೆ೧೦,ಜ್ಯೇಷ್ಠಕ್ಕೆ೧೪,ಮೂಲಕ್ಕೆ೫೬,ಪೂರ್ವಾಷಾಢಗೆ೨೪,ಉತ್ತರಾಷಾಢಗೆ೨೦,ಶ್ರವಣಕ್ಕೆ೧೦,ಧನಿಷ್ಠೆಗೆ೧೦,ಶತಭಿಷಕ್ಕೆಗೆ೧೮, ಪೂರ್ವಾಭಾದ್ರೆಗೆ೬,ಉತ್ತರಾಭಾದ್ರೆಗೆ ೨೪, ರೇವತಿಗೆ೩೦,ಈಮೇರೆ ನಕ್ಷತ್ರತ್ಯಾಜ್ಯಗಳನ್ನು ಈ ನಕ್ಷತ್ರಗಳಿಗೆ ಇಲ್ಲಿ ಹೇಳಲ್ಪಟ್ಟ ಅಂಕೆಗಳಮೇಲೆ ೪॥ ಘಳಿಗೆಗಳುವಿಷಗಳಿಗೆಗಳೆಂದು ತಿಳಿಯತಕ್ಕದ್ದು ಮೂಲಾನಕ್ಷತ್ರ

ಕ್ಕೆ ಮಾತ್ರ ೩ಂಗಳಿಗೆ ಮೇಲೆಯೂ ೧ ತ್ಯಾಜ್ಯವಿಧೆಯೆಂದು ಗ್ರಂಥಾಂತರದಲ್ಲಿ ಹೇಳಲ್ಪಟ್ಟಿಧೆ.

## ನಕ್ಷತ್ರಾಂಶರಾಶಿಗಳು.

ಶ್ಲೋ॥ ಸಪ್ತವಿಂಶತಿಭಂಜ್ಯೋತಿಶ್ಚಕ್ರಂತಿಮಿರವಾಯುಜಂ । ತದುಷ್ಟ್ವಾಂಶೋರ್ಧವೇದಾಶ್ರಿರ್ನವಕ್ಷರಚರಣಾಂಕಿತಃ ॥

ಟೀ॥ ಅಂಧಕಾರ ವಾಯುಗಳ ಸಂಯೋಗದಿಂದುಂಟಾದ ಜ್ಯೋತಿಶ್ಚಕ್ರವು ೨೭ ನಕ್ಷತ್ರರೂಪವಾಗುತ್ತವೆ, ಆ ನಕ್ಷತ್ರಗಳ ಪಾದಗಳು ೯ ಸೇರಿಯೊಂದೊಂದು ರಾಶಿಯಾಗಿ ಸೂರ್ಯನಗ್ರಹಗಳಾಗುತ್ತವೆ. ಹ್ಯಾಗೆಂದರೆ, ಅಶ್ವಿನಿಯ ಪಾದ ೪, ಭರಣಿಯ ಪಾದ ೪, ಕೃತ್ತಿಕೆಯ ಪಾದ ೧, ಅಂತು ೯ ಪಾದ ಮೇಷರಾಶಿ, ಕೃತ್ತಿಕೆಯಲ್ಲಿ ಉಳಿದ ಪಾದ ೩, ರೋಹಿಣಿಯ ಪಾದ ೪, ಮೃಗಶಿರದ ಪಾದ ೨, ಅಂತು ೯ ಪಾದ ವೃಷಭರಾಶಿ, ಮೃಗಶಿರದಲ್ಲಿ ಉಳಿದ ಪಾದ ೨, ಆರ್ದ್ರಾ ೪, ಪುನ ೩, ಅಂತು ೯ ಪಾದಗಳು ಮಿಥುನರಾಶಿಯು ಪುನ ೧, ಪುಷ್ಯ ೪, ಅಶ್ಲೇ ೪, ಅಂತು ೯ ಪಾದಗಳು ಕಟಕರಾಶಿಯು, ಮಘೆ ೪, ಹುಬ್ಬೆ ೪, ಉತ್ತ ೧, ಅಂತು ೯ ಪಾದಗಳು ಸಿಂಹರಾಶಿಯು, ಉತ್ತರೆ ೩, ಹಸ್ತ ೪, ಚಿತ್ರ ೨, ಅಂತು ೯ ಪಾದಗಳು ಕನ್ಯಾರಾಶಿಯು, ಚಿತ್ರ ೨, ಸ್ವಾತೀ ೪, ವಿಶಾಖೆ ೩, ಅಂತು ೯ ಪಾದಗಳು ತುಲಯು, ವಿಶಾಖೆ ೧, ಅನೂ ೪, ಜ್ಯೇ ೪ ಅಂತು ೯ ಪಾದಗಳು ವೃಶ್ಚಿಕವು, ಮೂಲ ೪, ಪೂಷಾ ೪, ಉತ್ತಷಾ ೧ ಅಂತು ೯ ಪಾದಗಳು ಧನುಸ್ಸು, ಉತ್ತರಾ ೩ ಶ್ರ ೪, ಧನಿ ೨, ಅಂತು ೯ ಪಾದಗಳು ಮಕರವು, ಧನಿಷ್ಠ ೨, ಶತ ೪, ಪೂಭಾ ೩, ಅಂತು ೯ ಪಾದಗಳು ಕುಂಭವು, ಪೂಭಾ ೧, ಉತ್ತಭಾ ೪, ರೇ ೪, ಅಂತು ೯ ಪಾದಗಳು ಮೀನರಾಶಿಯೆಂದು ತಿಳಿಯತಕ್ಕದ್ದು. ಮತ್ತು ೨೭ ನಕ್ಷತ್ರಗಳನ್ನು ೯ ಆವರ್ತಿ ತಿರಿಗಿಸಿದರೆ ೩ ನಕ್ಷತ್ರಕ್ಕೆ ೧೨ ರಾಶಿಗಳ ಮೇರೆ ಅಂಶರಾಶಿಗಳಾಗುತ್ತವೆ. ಹ್ಯಾಗಂದರೆ, ಅಶ್ವಿನೀ ೧ ನೇ ಪಾದಕ್ಕೆ ಮೇಷಾಂಶವು, ೨ ನೇ ದಕ್ಕೆ ವೃಷಭಾಂಶವು, ೩ ನೇದಕ್ಕೆ ಮಿಥುನಾಂಶವು, ೪ ನೇದಕ್ಕೆ ಕಟಕಾಂಶವು, ಭರಣಿ ೧ ನೇದಕ್ಕೆ ಸಿಂಹಾಂಶವು, ೨ ನೇದಕ್ಕೆ ಕನ್ಯಾಂಶವು, ೩ ನೇದಕ್ಕೆ ತುಲಾಂಶವು, ೪ ನೇದಕ್ಕೆ ವೃಶ್ಚಿಕಾಂಶವು, ಕೃತ್ತಿಕೆ ೧ ನೇದಕ್ಕೆ ಧನುರಾಂಶವು. ೨ ನೇದಕ್ಕೆ ಮಕರಾಂಶವು, ೩ ನೇದಕ್ಕೆ ಕುಂಭಾಂಶವು, ೪ ನೇದಕ್ಕೆ ಮೀನಾಂಶವು, ಈ ಮೇರೆ ೨೭ ನಕ್ಷತ್ರಗಳಿಗೂ ೩ ನಕ್ಷತ್ರಕ್ಕೆ ೧೨ ರಾಶ್ಯಂಗಗಳ ಮೇರೆ ತಿಳಿದುಕೊಳ್ಳತಕ್ಕದ್ದು.

## ಮೇಷಾದಿ ರಾಶಿಗಳು.

ಮೂ॥ ಮೇಷೋಗೌರ್ಮಿಥುನಂಕರ್ಕಿಃ ಹರಿಃ ಕನ್ಯಾವಣಿಕ್ತುತಃ । ಕೌಪಿರ್

ಚಾಪೌನಕ್ರಕುಂಭೌ ಮೀನೋಮೇಷಾದಿತೋಭವೇತ್॥

ಟೀ॥ ಮೇಷ, ವೃಷಭ, ಮಿಥುನ, ಕಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ ಯೆಂಬದಾಗಿ ತಿಳಿಯುವದು.

ರಾಶ್ಯಾಧಿಪತಿಗಳು.

ಮೂ॥ಸಿಂಹಸ್ಯಾಧಿಪತಿಸ್ಸೂರ್ಯಃಕರ್ಕಟಸ್ಯನಿಶಾಕರಃ।ಮೇಷವೃಶ್ಚಿ
ಕಯೋರ್ಭೌಮಃ ಕನ್ಯಾಮಿಥುನಯೋರ್ಬುಧಃ । ಕೋದಂಡ
ಮೀನಯೋರ್ಮಂತ್ರೀತುಲಾವೃಷಭಯೋರ್ಭೃಗುಃ।ನಕ್ರಸ್ಯ
ಕುಂಭರಾಶೇಶ್ಚನಾಯಕಸ್ಸೂರ್ಯನಂದನಃ॥

ಟೀ॥ ಸಿಂಹಕ್ಕೆ ಸೂರ್ಯನು, ಕಟಕಕ್ಕೆ ಚಂದ್ರನು, ಮೇಷ ವೃಶ್ಚಿಕಕ್ಕೆ ಅಂಗಾರಕನು, ಮಿಥುನ ಕನ್ಯಗಳಿಗೆ ಬುಧನು, ಧನುಸ್ಸು ಮೀನಗಳಿಗೆ ಗುರುವು, ವೃಷಭ ತುಲೆಗಳಿಗೆ ಶುಕ್ರನು, ಮಕರ ಕುಂಭಗಳಿಗೆ ಶನಿಯೂ ಅಧಿಪತಿಗಳೆಂದು ತಿಳಿಯಬೇಕು.

ಮೇಷಾದಿರಾಶಿ ಘಟಿಕಾ ಪ್ರಮಾಣಗಳು.

ಮೂ॥ ವಸ್ವಬ್ಧಿದಸ್ರಾಃಶರಶೈಲಪಕ್ಷಾ ಗುಣೇಂದುರಾಮಾಃಗುಣ
ದೈವತಾನಿ। ಕೃಶಾನುದಂತಾಪಸುಖಾಗ್ನಯಸ್ಸ್ಯುರ್ಮೇಷಾ
ದಿಷಡ್ವೃತ್ಕ್ರಮತಃಪರೇಸ್ಯುಃ॥

ಟೀ॥ಮೇಷರಾಶಿಗೆ ೪-೮, ವೃಷಭರಾಶಿಗೆ ೪-೩೫, ಮಿಥುನರಾಶಿಗೆ ೫-೧೩, ಕಟಕರಾಶಿಗೆ ೫-೩೫, ಸಿಂಹರಾಶಿಗೆ ೫-೨೨, ಕನ್ಯಾರಾಶಿಗೆ ೫-೮, ತುಲಾರಾಶಿಗೆ ೫-೮, ವೃಶ್ಚಿಕರಾಶಿಗೆ ೫-೨೨, ಧನೂರಾಸಿಗೆ ೫-೩೩, ಮಕರರಾಶಿಗೆ ೫-೧೩, ಕುಂಭರಾಶಿಗೆ ೪-೩೫, ಮೀನರಾಶಿಗೆ ೪-೮, ಈ ರೀತಿ ಯಾಗಿ ಮೇಷಾದಿರಾಶಿ ಘಟಿಕಾ ಪ್ರಮಾಣವನ್ನು ತಿಳಿಯತಕ್ಕದ್ದು.

ಇದರಲ್ಲಿ ಕೆಲವರಮತ.

ಮೂ॥ಮೀನಮೇಷೌಚತುರ್ದಂಡೀಗೋಕುಂಭೌಚತುರರ್ಧಕಂ।ಪಂ
ಚಪಾದೋಯುಗ್ಮಮೃಗೌ ಪಂಚಾರ್ಧಂ ಚಾಪಕರ್ಕಿಣೌ॥
ಕೌರ್ಪಿಸಿಂಹೌಚಪಂಚಾರ್ಧಂ ಪಂಚಪಾದಸ್ತುಲಾಂಗನೇ।
ಮೇಷಾದೀನಾಂತುಲಗ್ನಾನಾಂಮಾನಮೇವಂವಿದುರ್ಬುಧಾಃ॥

ಟೀ॥ಮೀನ ಮೇಷಗಳು ೪ ಘಳಿಗೆಗಳು, ವೃಷಭ ಕುಂಭಗಳು ೪||, ಮಿಥುನ ಮಕರಗಳು ೫|, ಧನುಸ್ಸು ಕಟಕಗಳು ೫|| ವೃಶ್ಚಿಕ ಸಿಂಹಗಳು ೫||, ಕನ್ಯಾ ತುಲಾ ೫| ಘಳಿಗೆಗಳೆಂದು ತಿಳಿಯುವದು.

ಚರ ಸ್ಥಿರ ದ್ವಿ ಸ್ವಭಾವ ರಾಶಿಗಳು.

ಮೂ॥ ಚರಸ್ಥಿರದ್ವಿಸ್ವಭಾವೋ ಮೇಷಾದಿಃಕ್ರಮಶೋಭವೇತ್॥

ಟೀ॥ ಮೇಷಚರರಾಶಿ, ವೃಷಭಸ್ಥಿರರಾಶಿ, ಮಿಥುನ ದ್ವಿಸ್ವಭಾವರಾಶಿ, ಈ ಮೇರೆ ಕಟಕ ಮೊದಲು ೩-೩ ರಾಸಿಗಳು ಚರ ಸ್ಥಿರ ದ್ವಿ ಸ್ವಭಾವರಾಶಿಗಳೆಂದು ತಿಳಿಯುವದು.

## ಲಗ್ನತ್ಯಾಜ್ಯಗಳು.

ಮೂ॥ ಅಜವೃಷಭಧನುಃಕನ್ಯಕಾದೌಭುಜಂಗಃ ಝಷಮಕರಕುಳೀ
ರೇವೃಶ್ಚಿಕಾಂತೇನರಾಹುಃ। ಮಿಥುನಘಟತುಲಾಸಾಂಸಿಂಹಮಧ್ಯೇತು
ಗೃಧ್ರಸ್ಸಕಲಮುನಿಮತಂಸ್ಯಾತ್ಸರ್ವಕಾರ್ಯೇಷುವರ್ಜ್ಯಂ॥

ಟೀ॥ ಮೇಷ, ವೃಷಭ, ಧನುಸ್ಸು, ಕನ್ಯೆ, ಈ ೪ರಾಶಿಗಳಿಗೂ ಮೊದಲು ೪ ಘಳಿಗೆ ತ್ಯಾಜ್ಯವು, ಸರ್ಪರೂಪವಾಗಿ ಇರುವದು, ಮೀನ, ಮಕರ, ಕರ್ಕಟ, ವೃಶ್ಚಿಕ, ಈ ರಾಶಿಗಳಲ್ಲಿಯೂ ಅಂತ್ಯದಲ್ಲಿ ೪ ಘಳಿಗೆ ತ್ಯಾಜ್ಯವು, ವರಾಹರೂಪವಾಗಿ ಇರುವದು ಮಿಥುನ, ತುಲಾ, ಸಿಂಹ, ಕುಂಭ, ಇವುಗಳ ಮಧ್ಯದಲ್ಲಿ ೪ ಘಳಿಗೆ ತ್ಯಾಜ್ಯವು, ಗೃಧ್ರರೂಪವಾಗಿ ಇರುವದು.

## ಉಚ್ಚನೀಚರಾಶಿಗಳು, ಪರಮೋಚ್ಚ ಪರಮನೀಚ ರಾಶಿಗಳು.

ಮೂ॥ ಅಜವೃಷಭಮೃಗಾಂಗನಾಕುಳೀರಾಃ ಝಷವಣಿಜೌದಿನಾಕರಾದಿತುಂಗಾಃ। ದಶಶಿಖಿಮನುಯುಕ್ತಿಥೀಂದ್ರಿಯಾಂಶೈಃ ಸ್ತ್ರಿನವಕವಿಂಶತಿಭಿಶ್ಚತೇಸ್ತನೀಚಾಃ॥

ಟೀ॥ ಸೂರ್ಯಾದಿ ೭ ಗ್ರಹಗಳಿಗೆ ಮೇಷಾದಿ ೭ ರಾಶಿಗಳು ಉಚ್ಚನೀಚಸ್ಥಾನಗಳು, ಹ್ಯಾಗಂದರೆ-ಸೂರ್ಯನಿಗೆ ಮೇಷ ಉಚ್ಚಸ್ಥಾನ, ಅದಕ್ಕೆ ೭ ನೇದು ತುಲಾ ರಾಶಿ ನೀಚಸ್ಥಾನ, ಚಂದ್ರನಿಗೆ ವೃಷಭ ಉಚ್ಚಸ್ಥಾನ, ಅದಕ್ಕೆ ೭ ನೇ ವೃಶ್ಚಿಕ ನೀಚಸ್ಥಾನ, ಅಂಗಾರಕನಿಗೆ ಮಕರ ಉಚ್ಚಸ್ಥಾನ, ಅದಕ್ಕೆ ೭ ನೇ ಕಟಕ ನೀಚಸ್ಥಾನ, ಬುಧನಿಗೆ ಕನ್ಯಾರಾಶಿ ಉಚ್ಚಸ್ಥಾನ, ಅದಕ್ಕೆ ೭ ನೇ ಮೀನ ನೀಚಸ್ಥಾನ, ಗುರುವಿಗೆ ಕಟಕ ಉಚ್ಚಸ್ಥಾನ, ಅದಕ್ಕೆ ೭ನೇ ಮಕರ ನೀಚಸ್ಥಾನ, ಶುಕ್ರನಿಗೆ ಮೀನ ಉಚ್ಚಸ್ಥಾನ, ಅದಕ್ಕೆ ೭ನೇ ಕನ್ಯೆ ನೀಚಸ್ಥಾನ, ಶನಿಗೆ ತುಲೆ ಉಚ್ಚಸ್ಥಾನ, ಅದಕ್ಕೆ ೭ ನೇ ಮೇಷ ನೀಚಸ್ಥಾನ ಈ ಮೇರೆ ತಿಳಿಯತಕ್ಕದ್ದು.

## ಮೂಲತ್ರಿಕೋಣರಾಶಿಗಳು.

ಮೂ॥ ಸಿಂಹಗೋಮೇಷಪಾಥೋನಧನುಸ್ತೌಲಿಘಟಾಮುಖ।ರವ್ಯಾದೇರ್ಮ್ರಿಖಬ್ಧ್ಯುಕ್ಷಂಚ ರವಿರ್ಹ್ಯಾಕೋದಿಶಸ್ತಥಾ। ತ್ರಿಪಂಚವಿಂಶತಿಸ್ಸಂಖ್ಯಾಭಾಗೋಮೂಲತ್ರಿಕೋಣಗಃ॥

ಟೀ॥ಸೂರ್ಯನಿಗೆ ಸಿಂಹದಲ್ಲಿ ೨೦ಭಾಗಗಳು ಮೂಲತ್ರಿಕೋಣ, ೧೦ಭಾಗೆ

ಸ್ವಕ್ಷೇತ್ರ, ಚಂದ್ರನಿಗೆ ವೃಷಭದಲ್ಲಿ ೩ ಭಾಗವುಚ್ಚ ಮಿಕ್ಕ ೨೭ಭಾಗ ಮೂಲತ್ರಿಕೋಣ, ಅಂಗಾರಕನಿಗೆ ಮೇಷದಲ್ಲಿ ೧೨ ಭಾಗ ಮೂಲತ್ರಿಕೋಣ, ಮಿಕ್ಕ ಭಾಗಗಳು ಸ್ವಕ್ಷೇತ್ರಗಳು, ಬುಧನಿಗೆ ಕನ್ಯೆಯಲ್ಲಿ ೧೬-೧೭-೧೮-೧೯-೨೦ ಈ ೫ ಭಾಗಗಳು ಮೂಲತ್ರಿಕೋಣಗಳು ಬೃಹಸ್ಪತಿಗೆ ಧನೂರಾಶಿಯಲ್ಲಿ ೧೦ ಭಾಗಗಳು ಮೂಲತ್ರಿಕೋಣಗಳು, ಶುಕ್ರನಿಗೆ ತುಲೆಯಲ್ಲಿ ೧೫ ಬಾಗಮೂಲತ್ರಿಕೋಣ, ಶನಿಗೆ ಕುಂಭರಾಶಿಯಲ್ಲಿ ೨೦ಭಾಗ ಮೂಲತ್ರಿಕೋಣವೆಂದು ತಿಳಿಯತಕ್ಕದ್ದು.

ಮಿತ್ರಶತ್ರು ಸಮಗ್ರಹಗಳು

ಮೂ॥ ಶತ್ರೂಮಂದಸಿತೌಸಮಶ್ಚಶಿಸುತೋಮಿತ್ರಾಣಿಶೇಷಾರವೇ । ಸ್ತೀಕ್ಷ್ಣಾಂಶುರ್ಹಿಮರಶ್ಮಿಜಶ್ಚಸುಹೃದೌಶೇಷಾಸ್ಸಮಾಶೀತಗೋಃ॥ ಜೀವೇಂದೂಷ್ಣಕರಾಃಕುಜಸ್ಯಸುಹೃದೋಜ್ಞೋರಿಸ್ಸಿತಾರ್ಕೀಸಮೌ । ಮಿತ್ರೇಸೂರ್ಯಸಿತೌಬುಧಸ್ಯಹಿಮಗುಶ್ಶತ್ರುಸ್ಸಮಾಶ್ಚಾಪರೇ ॥

ಟೀ॥ ಸೂರ್ಯನಿಗೆ ಶನಿ ಶುಕ್ರರು ಶತ್ರುಗಳು, ಬುಧನು ಸಮನು, ಕುಜಚಂದ್ರಗುರು, ಇವರುಗಳು ಮಿತ್ರರು. ಚಂದ್ರನಿಗೆ ಸೂರ್ಯ ಬುಧರು ಮಿತ್ರರು- ಕುಜ ಗುರು ಶುಕ್ರ ಶನಿಗಳು ಸಮರು. ಕುಜನಿಗೆ ಬೃಹಸ್ಪತಿ ಚಂದ್ರ ಸೂರ್ಯ, ಯಿವರುಗಳು ಮಿತ್ರರು. ಬುಧನು ಶತ್ರುವು, ಶುಕ್ರ ಶನಿಗಳು ಸಮರು ಬುಧನಿಗೆ ಸೂರ್ಯ ಶುಕ್ರರು ಮಿತ್ರರು, ಚಂದ್ರನು ಶತ್ರುವು. ಮಿಕ್ಕ ಕುಜ ಗುರು ಶನಿಗಳು ಸಮರೆಂದು ತಿಳಿಯತಕ್ಕದ್ದು.

ಮೂ॥ ಸೂರಸ್ಸೌಮ್ಯಸಿತಾವರೀರವಿಸುತೋಮಧ್ಯಃಪರೇತ್ವನ್ಯಥಾಸೌಮ್ಯಾರ್ಕೀಸುಹೃದೌಸಮೌಕುಜಗುರೂಶುಕ್ರಸ್ಯಶೇಷಾವರೀ ॥ ಶುಕ್ರಜ್ಞೌ ಸುಹೃದೌಸಮಸ್ಸುರಗುರುಸ್ಸೌರಸ್ಯಚಾನ್ಯೇರಯೋಯೇಪ್ರೋಕ್ತಾಸ್ಸುಹೃದಸ್ತ್ರಿಕೋಣಭವನಾತ್ತೇಮೀಮಯೋಕ್ತೇನತಃ॥

ಟೀ॥ ಬೃಹಸ್ಪತಿಗೆ ಬುಧ ಶುಕ್ರರು ಶತ್ರುಗಳು, ಶನಿಸಮನು, ರವಿಚಂದ್ರ ಕುಜರು ಮಿತ್ರರು. ಶುಕ್ರನಿಗೆ ಬುಧ ಶನಿಗಳು ಮಿತ್ರರು, ಕುಜ ಗುರುಗಳು ಸಮರು, ರವಿಚಂದ್ರರು ಶತ್ರುಗಳು ಶನಿಗೆ ಶುಕ್ರಬುಧರು ಮಿತ್ರರು, ಬೃಹಸ್ಪತಿಯು ಸಮನು, ರವಿಚಂದ್ರ ಕುಜರು ಶತ್ರುಗಳಾಗಿ ಗ್ರಹಗಳ ಮೂಲತ್ರಿಕೋಣ ರಾಶಿಗಳನ್ನು ಹಿಡಿದು ಪೂರ್ವಿಕರು ಹೇಳಿದ ಶತ್ರುಮಿತ್ರ ಗ್ರಹಗಳು ಇಲ್ಲನನ್ನಿಂದ ಹೇಳಲ್ಪಟ್ಟಿತು.

ಅನಂತರ ನವಗ್ರಹಗಳ ಕ್ರೂರ, ಸೌಮ್ಯ, ಪುರುಷ, ಸ್ತ್ರೀನಪುಂಸಕ ಸಂಜ್ಞೆಗಳನ್ನು, ಜಾತಿ ನಿರ್ಣಯಪನ್ನೂ ತಿಳಿಸುತ್ತಾನೆ

ಮೂ॥ ಕ್ರೂರಾಭಾನುತಮಶ್ಶಿಖಿಧ್ವಜಕುಜಾಶ್ಶುಕ್ರಾರ್ಯಸೌಮ್ಯೇಂದವ

ವಸ್ಸೌಮ್ಯಾಸ್ತೈಪುರುಷಾಃಕುಜಾರ್ಕಗುರವಃರಾಹ್ವಿಂದುಶುಕ್ರಾಃಸ್ತ್ರಿಯಃ । ಶಿಕ್ಟೈಷಾಸ್ತುನಪುಂಸಕಾಗುರುರ್ಭೃಗೂವಿಪ್ರಾಃಕುಜಾರ್ಕೌನೃಪೌವೈಶ್ಯಃಶಂದ್ರಬುಧೌತದನ್ಯಕುಲಜೋಮಂದಸ್ತುವರ್ಣೇಶ್ವರಃ ॥ ಬುಧಃಪಾಪಯುತಃಪಾಪಃಕ್ಷೀಣಶ್ಚಂದ್ರಸ್ತಥೈವಚ॥

ಟೀ॥ ಸೂರ್ಯನು, ರಾಹು, ಶನಿ, ಕೇತು, ಕುಜನು, ಈ ೫ ಗ್ರಹಗಳು ಕ್ರೂರಗಳು, ಅಂದರೆ ಪಾಪಗ್ರಹಗಳು. ಶುಕ್ರನು ಗುರು, ಬುಧನು,ಚಂದ್ರನು, ಈ ೪ ಗ್ರಹಗಳು ಸೌಮ್ಯರು, ಅಂದರೆ ಶುಭಗ್ರಹಗಳು ಇಲ್ಲಿ ವಿಶೇಷವೆಂತೆಂದರೆ, ಶುಭಗ್ರಹಗಳಾಗಿ ಹೇಳಲ್ಪಟ್ಟ ಬುಧ ಚಂದ್ರರೊಳು ಪಾಪಗ್ರಹಗಳೊಂದಿಗೆ ಸೇರಿದ ಬುಧನು, ಕ್ಷೀಣವಾದ ಚಂದ್ರನು, ಇವರಿಬ್ಬರು ಪಾಪಗ್ರಹಗಳಾಗುತ್ತಾರೆಂದು ತಿಳಿಯುವದು. ಕುಜನು, ಸೂರ್ಯನು, ಬೃಹಸ್ಪತಿಯು, ಈ ೩ ಪುರುಷಗ್ರಹಗಳು. ರಾಹುವು, ಚಂದ್ರನು, ಶುಕ್ರನು,ಈ ೩ ಸ್ತ್ರೀ ಗ್ರಹಗಳು. ಬುಧನು, ಶನಿಯು, ಕೇತು, ಈ ೩ ನಪುಂಸಕ ಗ್ರಹಗಳು. ಗುರು, ಶುಕ್ರನು ಈ ೨ ಬ್ರಾಹ್ಮಣಜಾತಿ ಗ್ರಹಗಳು ಅಂಗಾರಕನು, ಸೂರ್ಯನು, ಈ ೨ ಕ್ಷತ್ರಿಯಜಾತಿ ಗ್ರಹಗಳು, ಚಂದ್ರನು, ಬುಧನು, ಈ ೨ ವೈಶ್ಯಜಾತಿ ಗ್ರಹಗಳು, ಶನಿಯು ಶೂದ್ರಜಾತಿ ಗ್ರಹವು ಈ ಮೇರೆ ಗ್ರಹಗಳ ವರ್ಣಗಳನ್ನು ತಿಳಿಯತಕ್ಕದ್ದು.

ನವಗ್ರಹಗಳ ಧಾತ್ವಾದಿ ವರ್ಣಗಳು

ಶ್ಲೋ॥ಬೃಹಜ್ಜಾತಕೇ॥ರಕ್ತಶ್ಯಾಮೋಭಾಸ್ಕರೋಗೌರಇಂದುರ್ನಾತ್ಯುಚ್ಚಾಂಗೋರಕ್ತಗೌರಶ್ಚ ಶುಕ್ರಃ।ದೂರ್ವಾಶ್ಯಾಮೋಜ್ಞೋಗುರುರ್ಗೌರಗಾತ್ರಃ।ಶ್ಯತಶ್ಯ ಕೋಭಾಸ್ವರಃಕೃಷ್ಣದೇಹಃ॥

ಟೀ॥ ಸೂರ್ಯನು ಕೆಂಪು ಕಪ್ಪು ಮಿಶ್ರವಾದ ಬಣ್ಣವುಳ್ಳವನು, ಚಂದ್ರನು ಬಿಳೀ ಬಣ್ಣವುಳ್ಳವನು, ಅಂಗಾರಕನು ಬಹಳ ಉದ್ದನಲ್ಲದೆ ಬಿಳುಪು ಕೆಂಪು ಮಿಶ್ರವಾದ ಬಣ್ಣವುಳ್ಳವನು, ಬುಧನು ಗರಿಕೆಯಂತೆ ಹಸರು ಬಣ್ಣವುಳ್ಳವನು, ಬೃಹಸ್ಪತಿ ಹಳದೀಬಣ್ಣವುಳ್ಳವನು, ಶುಕ್ರನು ಬಿಳೀ ಬಣ್ಣವುಳ್ಳವನು, ಶನಿಯು ಕಪ್ಪು ಬಣ್ಣವುಳ್ಳವನು.

ಮೂ॥ರಾಹುಸ್ತುಧೂಮ್ರವರ್ಣಶ್ಚ। ಚಿತ್ರವರ್ಣೋಧ್ವಜಸ್ಮೃತಃ।

ಟೀ॥ರಾಹುವು ಧೂಮ್ರವರ್ಣವುಳ್ಳವನು, ಕೇತುವು ಚಿತ್ರವರ್ಣವುಳ್ಳವನೆಂದು ತಿಳಿಯುವದು.

ಮೂ॥ ತ್ರಿದಶತ್ರಿಕೋಣಚತುರಶ್ರಸಪ್ತಗಾನವಲೋಕಯಂತಿಚರಣಾಭಿವೃದ್ಧಿತಃ ॥ ರವಿಜಾಮರೇಡ್ಯರುಧಿರಾಃ ಪರೇಚಯೆ।ಕ್ರಮಶೋಭವಂತಿ ಪರಿವೀಕ್ಷಣಾಧಿಪಾಃ॥

ಟೀ॥ಶನಿಯು ತಾನಿರುವ ರಾಶಿಗೆ ೩–೧೦ನೇ ರಾಶಿಗಳಲ್ಲಿ ಗ್ರಹಗಳನ್ನು ಪಾದದೃಷ್ಟಿಯಿಂದ ನೋಡುವನು, ಗುರುವು ತಾನಿರುವರಾಶಿಗೆ ೫–೯ ರಾಶಿಗಳನ್ನು ಗ್ರಹಗಳನ್ನು ಅರ್ಧದೃಷ್ಟಿಯಿಂದ ನೋಡುವನು, ಅಂಗಾರಕನು ತಾನು ಯಿರುವ ರಾಶಿಗೆ ೪–೮ನೇ ರಾಶಿಗಳನ್ನು ತ್ರಿಪಾದದೃಷ್ಟಿಯಿಂದ ನೋಡುವನು, ಇವು ವಿಶೇಷದೃಷ್ಟಿಗಳು, ಆದರೆ ಸರ್ವಗ್ರಹಗಳು ತಾವು ಯಿರುವ ರಾಶಿಗಳಿಗೆ ೭ನೇ ರಾಶಿಗಳನ್ನೇ ನೋಡುವರು.

ಕುರುಡು–ಕಿವುಡು– ಕುಂಟ– ರಾಶಿಗಳು.

ಮೂ॥ಮೇಷಾದಿಚಾಂಧಕಂಷಟ್ಕಂ ಚತ್ವಾರೋಬಧಿರಾಸ್ತಥಾ।ದ್ವೌ
ಚಪಂಗೂಸವಿಜ್ಞೇಯೌ ತದ್ಭೇದಾಃಪರಿಕೀರ್ತಿತಾಃ॥

ಟೀ॥ ಮೇಷಮೊದಲು ೬ರಾಶಿಗಳು ಕುರುಡು ರಾಶಿಗಳು, ಅದರ ತರುವಾಯ ೪ ರಾಶಿಗಳು ಕಿವುಡು ರಾಶಿಗಳು, ಅವರ ತರುವಾಯ ೨ಕುಂಟ ರಾಶಿಗಳೆಂದು ತಿಳಿಯತಕ್ಕದ್ದು. ಅಂದರೆ, ಮೇಷ ಮೊದಲು ಕನ್ಯಾರಾಶಿವರಿಗೆ ಕುರುಡು ರಾಶಿಗಳು, ತುಲಾಹಿಡಿದು ಮಕರ ವರಿಗು ೪ ರಾಶಿಗಳು ಕಿವುಡು ರಾಶಿಗಳು, ಕುಂಭ ಮೀನ ಇವೆರಡು ಕುಂಟ ರಾಶಿಗಳೆಂದು ತಿಳಿಯತಕ್ಕದ್ದು.

ಮೂ॥ಅಜೋವೃಷೋ ಮೃಗೇಂದ್ರಶ್ಚ ಅರ್ಧರಾತ್ರೌ ಮಹಾಂಧಕಾಃ॥
ಯುಗ್ಮಾಂಗನಾ ಕುಳೀರಾಶ್ಚ ಮಧ್ಯಾಹ್ನೆ ಚಾಂಧಕಾಸ್ಮೃತಾಃ।
ಇತ್ಯೇವಂಕಾಲಭೇದೇನ ಶುಭದಾಶ್ಚ ಪ್ರಕೀರ್ತಿತಾಃ॥

ಟೀ॥ ಮೇಷ, ವೃಷಭ, ಸಿಂಹ, ಈ೩ ರಾಸಿಗಳು ಅರ್ಧ ರಾತ್ರಿಯಲ್ಲಿ ಕುರುಡು ರಾಶಿಗಳು ಮಿಥುನ, ಕನ್ಯಾ, ಕರ್ಕಾಟಕ ಈ ೩ ರಾಶಿಗಳು ಮಧ್ಯಾಹ್ನ ಕಾಲದಲ್ಲಿಯೂ ಕುರುಡು ರಾಶಿಗಳು ಇವೆಲ್ಲವು ಕಾಲಭೇದದಿಂದ ಸುಖಕರಗಳೆಂದು ತಿಳಿಯತಕ್ಕದ್ದು.

ಮೂ॥ ತುಲಾಚವೃಶ್ಚಿಕಶ್ಚೈವ ಬಧಿರೌಚಾಪರಾಹ್ಣಕೈಃ।ರಾತ್ರೌಚ
ಬಧಿರೌಪ್ರೋಕ್ತೌ ಮಕರಶ್ಚ ಧನುರ್ಗ್ರಹಂ॥ಉಭಯೋಸ್ಸಂಧ್ಯ
ಯೋಃಪಂಗೂಕುಂಭಮೀನೌಪ್ರಕೀರ್ತಿತಾಃ॥

ಟೀ॥ ತುಲಾವೃಶ್ಚಿಕಗಳು ಮಧ್ಯಾಹ್ನದಲ್ಲಿ ಕುರುಡು ರಾಶಿಗಳು, ಮಕರ ಧನುಸ್ಸುಗಳು ರಾತ್ರಿಯಲ್ಲಿ ಕಿವುಡು, ಕುಂಭ ಮೀನರಾಶಿಗಳು ಬೆಳಗ್ಯೆ ಮತ್ತು ಸಾಯಂಕಾಲದಲ್ಲಿ ಕೂಡಾ ಕುಂಟ ರಾಶಿಗಳೆಂವು ತಿಳಿಯುವದು.

ಷಡ್ವರ್ಗಲಕ್ಷಣಗಳು.

ಮೂ॥ತ್ರಿಂಶದ್ಭಾಗಾತ್ಮಕಂಲಗ್ನಂಹೋರಾತಸ್ಯಾರ್ಧಮುಚ್ಯತೆ ॥
ರಾಶಿತ್ರಿಭಾಗೋದ್ರೇಕ್ಕಾಣಃ ನವಾಂಶೋನವಭಾಗಕಃ॥ದ್ವಾ
ದಶಾಂಶೋದ್ವಾದಶಾಂಶ ಸ್ತ್ರಿಂಶಾಂಶಸ್ತ್ರಿಂಶದಂಶಕಃ।ಷಡ್ವ

ಗ್ರಲಕ್ಷಣಾಃ ಪ್ರೋಕ್ತಂ ಸರ್ವಲಗ್ನಷ್ವಯಂ ಕ್ರಮಃ ॥

ಟೀ॥ ಲಗ್ನವನ್ನು ೨ ಭಾಗ ಮಾಡಿದರೆ ಹೋರೆಯನ್ನಿಸಿಕೊಳ್ಳುತ್ತದೆ ೩ ಭಾಗ ಮಾಡಿದರೆ ದ್ರೇಕ್ಕಾಣವೆನ್ನಿಸಿಕೊಳ್ಳುತ್ತವೆ ೯ ಭಾಗಮಾಡಿದರೆ ನವಾಂಶವೆನ್ನಿಸಿಕೊಳ್ಳುತ್ತವೆ, ೧೨ ಭಾಗಮಾಡಿದರೆ ದ್ವಾದಶಾಂಶವೆನ್ನಿಸಿಕೊಳ್ಳುತ್ತವೆ. ೩೦ ಭಾಗ ಮಾಡಿದರೆ ತ್ರಿಂಶಾಂಶವೆನ್ನಿಸಿಕೊಳ್ಳುತ್ತವೆ ಪನಂಚ ಲಗ್ನ, ಹೋರಾ, ದ್ರೇಕ್ಕಾಣ, ನವಾಂಶ, ದ್ವಾದಶಾಂಶ, ತ್ರಿಂಶಾಂಶ, ಇವುಗಳು ಷಡ್ವರ್ಗಗಳಾಗುತ್ತವೆ.

## ಹೋರಾದ್ರೇಕ್ಕಾಣಗಳು.

ಮೂ॥ ಹೋರಾರ್ಕಚಂದ್ರಯೋರೋಜೆ ಯುಗ್ಮೇ ಚಂದ್ರಸೂರ್ಯಯೋಃ ।
ಲಗ್ನಪಂಚನವಕ್ಷೇತ್ರನಾಥಾದ್ರೇಕ್ಕಾಣಪಾಃ ಕ್ರಮಾತ್ ॥

ಟೀ॥ ಓಜ ರಾಶಿಗೆ ಮೊದಲು ಅರ್ಧ ಸೂರ್ಯಹೋರೆ, ೨ನೇ ಅರ್ಧ ಚಂದ್ರ ಹೋರೆ, ಯುಗ್ಮ ರಾಶಿಗೆ ಮೊದಲು ಅರ್ಧ ಚಂದ್ರಹೋರೆ, ೨ನೇ ಅರ್ಧ ಸೂರ್ಯ ಹೋರೆ, ಈ ಪ್ರಕಾರ ೧೨ ರಾಶಿಗಳಿಗೆ ತಿಳಿಯತಕ್ಕದ್ದು.

ಮೂ॥ ಚರೇಸ್ವಪುತ್ರನವಮಾಃ ಸ್ಥಿರೇ ಧರ್ಮಸ್ವಪುತ್ರಪಾಃ । ಪುತ್ರಧರ್ಮ
ಸ್ವಪಾ ದ್ವಿಸ್ವೇ ದ್ರೇಕ್ಕಾಣಸ್ಯ ಪ್ರಕೀರ್ತಿತಾಃ ॥

ಟೀ॥ ಆ ದ್ರೇಕ್ಕಾಣದಲ್ಲಿ ಚರರಾಶಿಗೆ ಮೊದಲು ಭಾಗ ಲಗ್ನ ದ್ರೇಕ್ಕಾಣ, ೨ನೇ ಭಾಗ ಪಂಚಮ ರಾಶಿ ದ್ರೇಕ್ಕಾಣ, ೩ನೇ ಭಾಗ ನವಮ ರಾಶಿ ದ್ರೇಕ್ಕಾಣ, ಸ್ಥಿರಲಗ್ನಕ್ಕೆ ಮೊದಲು ಭಾಗ ನವಮರಾಶಿ ದ್ರೇಕ್ಕಾಣ, ೨ನೇ ಭಾಗ ಲಗ್ನ ದ್ರೇಕ್ಕಾಣ, ೩ನೇ ಭಾಗ ಪಂಚಮರಾಶಿ ದ್ರೇಕ್ಕಾಣ, ದ್ವಿಸ್ವಭಾವರಾಶಿಗೆ ಮೊದಲುಭಾಗ, ಪಂಚಮರಾಶಿ ದ್ರೇಕ್ಕಾಣ, ೨ನೇ ಭಾಗ ನವಮರಾಶಿ ದ್ರೇಕ್ಕಾಣ ಮೂರನೇ ಭಾಗ ಲಗ್ನ ದ್ರೇಕ್ಕಾಣವೆಂದು ತಿಳಿಯತಕ್ಕದ್ದು

## ನವಾಂಶಕ್ರಮ.

ಮೂ ॥ ಮೇಷಸಿಂಹಧನುಷ್ಕಾಜಾದಯಃ ಸ್ತ್ರೀಕುಂಭಮಿಥುನೇತು
ಲಾದಯಃ । ಕನ್ಯಕಾಮೃಗವೃಷೇ ಮೃಗಾದಯಃ ಮೀನಕರ್ಕ್ಯ
ಳಿಷು ಕರ್ಕಟಾದಯಃ ॥

ಟೀ॥ ಮೇಷ, ಸಿಂಹ, ಧನುಸ್ಸು, ಈ ಮೂರು ರಾಸಿಗಳಲ್ಲಿ ಮೇಷರಾಸಿ ಮೊದಲಾಗಿ ನವಾಂಶಭಾಗಗಳನ್ನು ಯೆಣಿಸಬೇಕು. ವೃಷಭ, ಕನ್ಯಾ, ಮಕರ ರಾಸಿಗಳಲ್ಲಿ ಮಕರ ಮೊದಲಾಗಿ ಯೆಣಿಸತಕ್ಕದ್ದು. ಮಿಥುನ, ತುಲಾ, ಕುಂಭ, ಈ ರಾಸಿಗಳಲ್ಲಿ ತುಲಾ ಮೊದಲಾಗಿ ಯೆಣಿಸತಕ್ಕದ್ದು. ಕಟಕ, ವೃಶ್ಚಿಕ ಮೀನ ರಾಶಿಗಳಲ್ಲಿ ಕಟಕರಾಸಿ ಮೊದಲಾಗಿ ಯೆಣಿಸತಕ್ಕದ್ದು.

ದ್ವಾದಶಾಂಶ ಕ್ರಮವು

ಮೂ॥ ಲಗ್ನಾದಿಷುದ್ವಾದಶಾಂಶಜನ್ಮಾದ್ವಾದಶಾಂಶಕಾಃ॥

ಟೀ॥ ಲಗ್ನ ಮೊದಲು ೧೨ ರಾಶಿಗೂ ೧೨ ಭಾಗ ಕೊಡತಕ್ಕದ್ದು, ಅಂದರೆ ಲಗ್ನವನ್ನು ೧೨ ಭಾಗಮಾಡಿ ಲಗ್ನ ಮೊದಲು ೧—೧ ಭಾಗಕ್ಕೆ ೧—೧ ರಾಶಿಗಳಾಗ ನೋಡಿಕೊಳ್ಳತಕ್ಕದ್ದು.

ತ್ರಿಂಶಾಂಶ ಕ್ರಮವು

ಮೂ॥ ಕುಜಶನಿಜಗುರುಜ್ಞಶುಕ್ರಭಾಗಾಃ ಪವನಸಮೀರಣಕೌರ್ಪ್ಯಜೂಕಲೇಯಾಃ। ಅಯುಜಿಯುಜಿತುತೇವಿಪರ್ಯಯಸ್ಥಾಃ ಶಶಿಭವನಾಳಿಝಷಾಂತ್ಯೇ ಋಕ್ಷಸಂಧಿಃ॥

ಟೀ॥ ಲಗ್ನ ಓಜರಾಶಿಯಾದರೆ ಅದರ ೩೦ ಭಾಗಗಳಲ್ಲಿ ಮೊದಲು ೫ ಭಾಗ ಕುಜನಿಗೂ, ತರುವಾಯ ೫ ಭಾಗ ಶನಿಗೂ, ತರುವಾಯ ೮ ಭಾಗ ಗುರುವಿಗೂ, ತರುವಾಯ ೭ ಭಾಗ ಬುಧನಿಗೂ, ತರುವಾಯ ೫ ಭಾಗ ಶುಕ್ರನಿಗೂ, ಕೊಡಬೇಕು. ಯುಗ್ಮರಾಶಿಯಾದರೆ ಮೊದಲು ೫ ಭಾಗ ಶುಕ್ರನಿಗೂ, ತರುವಾಯ ೭ ಭಾಗ ಬುಧನಿಗೂ, ತರುವಾಯ ೮ ಭಾಗ ಗುರುವಿಗೂ, ತರುವಾಯ ೫ ಭಾಗ ಶನಿಗೂ, ತರುವಾಯ ೫ ಭಾಗ ಅಂಗಾರಕನಿಗೂ ಕೊಡತಕ್ಕದ್ದು ಇದೇ ತ್ರಿಂಶಾಂಶವು.

ಪಕ್ಷಚ್ಛಿದ್ರಗಳು

ಮೂ॥ ಅಷ್ಟಮೀದ್ವಾದಶೀಷಷ್ಠೀಚತುರ್ಥೀಚಚತುರ್ದಶೀ। ಪಕ್ಷಚ್ಛಿದ್ರಾಖ್ಯತಿಥಯಃಶುಭಕಾರ್ಯೇಷುನಿಂದಿತಾಃ॥

ಟೀ॥ ಅಷ್ಟಮೀ, ದ್ವಾದಶೀ, ಷಷ್ಠೀ, ಚತುರ್ಥೀ, ಚತುರ್ದಶೀ, ಈ ತಿಥಿಗಳು ಪಕ್ಷಛಿದ್ರಗಳಾದ್ದರಿಂದ ಶುಭಕಾರ್ಯಗಳಲ್ಲಿ ಇವುಗಳನ್ನು ಬಿಡತಕ್ಕದ್ದು.

ಪಂಚ ಪರ್ವಗಳು.

ಮೂ॥ ಕೃಷ್ಣಾಷ್ಟಮೀಚತುರ್ದಶ್ಯಮಾವಾಸ್ಯಾಚಪೂರ್ಣಿಮಾ। ಸಂಕ್ರಾಂತಿಃ ಪರ್ವತಿಥಯೋಮುನಿಭಿಃಪರಿಕೀರ್ತಿತಾಃ॥

ಟೀ॥ ಕೃಷ್ಣಾಷ್ಟಮೀ, ಚತುರ್ದಶೀ, ಅಮಾವಾಸ್ಯೆ, ಪೂರ್ಣಿಮಾ, ಸಂಕ್ರಾಂತಿಯು ಇವುಗಳು ಪರ್ವತಿಥಿಗಳೆಂದು ಮುನಿಗಳು ಹೇಳಿದರು.

ಘಟಿಕಾ ಪ್ರಮಾಣವು.

ಮೂ॥ ಯಾವತ್ಯಶ್ಚರಣಪ್ರಭಾಃ ಪ್ರತಿದಿನಂಮೇಷಾದಿಷಟ್ಸುಕ್ರಮಾ। ದೋಜ್ಯಾಶ್ಚೈವತುಲಾದಿಷಟ್ಸುಜಲಧಿತ್ರಿದ್ವ್ಯಕ್ಷಿರಾಮಾಬ್ಧಯಃ। ಅಧೀಃಕೃತ್ಯದಿನಪ್ರಮಾಣಘಟಿಕಾಸ್ಸಪ್ತಾಹತಾಃನಾಡಿಕಾ। ಸ್ವಾವತ್ಯಃ ಪರಪೂರ್ವಯೋಸ್ಥತಗತಾಯುಕ್ತ್ಯಾಸ್ವಸಂಖ್ಯಾಭಿದಾಃ॥

ಟೀ॥ ಪ್ರತಿದಿನವು ಹಗಲಿನಲ್ಲಿ ಸೂರ್ಯನಿಗೆ ಎದುರಾಗಿ ನಿಂತುಕೊಂಡು ತಾನು ನಿಂತ ಅಡಿಯೊಂದಿಗೆ ತಂನ ನೆರಳು ಯೆಷ್ಟಡಿಯಾಗುತ್ತದೋ ಅದರಸಂಖ್ಯೆಯೊಂದಿಗೆ ಮೇಷಕ್ಕೆ ೪, ವೃಷಭಕ್ಕೆ ೭, ಮಿಥುನಕ್ಕೆ ೨, ಕಟಕಕ್ಕೆ ೨, ಸಿಂಹಕ್ಕೆ ೩, ಕನ್ಯೆಗೆ ೪, ತುಲೆಗೆ೬, ವೃಶ್ಚಿಕಕ್ಕೆ೭, ಧನುಸ್ಸಿಗೆ೨, ಮಕರಕ್ಕೆ ೨, ಕುಂಭಕ್ಕೆ೩,ಮೀನಕ್ಕೆ೬, ಈ ಮೇರ ಹೇಳಲ್ಪಟ್ಟಿರುವ ಧೃವಸಂಖ್ಯೆಗಳಲ್ಲಿ ಆಯಾ ತಿಂಗಳಿಗೆ ಆಗುವ ಧೃವವನ್ನು, ಸದರಿ ಪಾದಛಾಯೆಯೊಂದಿಗೆ ಶೇರಿಸಿ ಪ್ರತ್ಯೇಕ ಮಂದುರಾಸಿಯಾಗಿ ಇಡಬೇಕು, ಮತ್ತು ಆಯಾ ತಿಂಗಳಿಗೆ ಆಯುಃ ಪ್ರಮಾಣ ಘಟಿಕೆಗಳು ಎಷ್ಟು ಆಗುತ್ತದೋ ಅದರಲ್ಲಿ ಅರ್ಧವನ್ನು ೭೦ರಿಂದ ಗುಣಿಸಿ, ಅದರ ಸಂಖ್ಯೆಯನ್ನು ಪ್ರತ್ಯೇಕ ಇಟ್ಟು ಯಿರುವ ಧೃವರಾಸಿಯಿಂದ ಭಾಗಿಸುವಾಗ ಯೆಷ್ಟು ಮಿಗುಲುತ್ತದೋ ಅಷ್ಟು ಗಳಿಗೆಗಳು ದಿನದ ಪೂರ್ವಾರ್ಧ ಅಪರಾರ್ಧಗಳಲ್ಲಿ ಕಳೆದವೆಂಬದಾಗಿಯೂ ಉಳಿದವೆಂಬದಾಗಿಯೂ ತಿಳಿಯತಕ್ಕದ್ದು.

ಪಾದಚ್ಛಾಯ ಅಡಿಗಳನ್ನು ನೋಡತಕ್ಕದ ಬಗ್ಯೆ ವರರುಚಿಸೂತ್ರ ಇಲ್ಲಿ ಬರಿಯಲ್ಪಡುತ್ತದೆ ಹ್ಯಾಗಂದರೆ,—

ಮೇಷೆ ಗಿರಿಪ್ರು, ವೃಷಭೆ ಟಸಟ, ಮಿಥುನೆ ಕರಲಿ, ಕಟಕೆ ಕರುಬ, ಸಿಂಹೆ ಕನಯ, ಕನ್ಯಾ ಕುರುಬ, ತುಲಾ ಲನಕ, ವೃಶ್ಚಿಕ ದೂತಾಸ, ಧನುಷಿ ಸಿಜಲ, ಮಕರಂ ದದಾಸಿ, ಕುಂಭೆ ಸಿತಶ, ಮೀನೆ ಶುಭಗ, ಈ ೧೨ ವಾಕ್ಯಗಳಿಗೆ ತಾತ್ಪರ್ಯ. ಮೇಷ ಮಾಸಕ್ಕೆ ೧೦ ತೇದಿವರಿಗೆ ಒಂದು ಅಕ್ಷರಪ್ರಕಾರ ಕೆಳಗೆ ಸೂತ್ರದಲ್ಲಿ ಹೇಳಿದ ಮೂರಕ್ಷರಕ್ಕೆ ೧೦ ತೇದಿವರಿಗು—ಗಿ—ಎಂಬ ಅಕ್ಷರವು, ೨ನೇ ೧೦ ತೇದಿವರಿಗು—ರಿ—ಯೆಂಬ ಅಕ್ಷರವು, ೩ನೇ೧೦ತೇದಿವರಿಗು—ಪ್ರು—ಯೆಂಬ ಅಕ್ಷರವು,—ಗಿ—೩,—ರಿ—೨, ಪ್ರು—೧, ಈ ಅಕ್ಷರ ಸಂಖ್ಯೆಯನ್ನು ನೋಡಿಕೊಳ್ಳತಕ್ಕದ್ದು. ಇಲ್ಲಿ ಹೇಳಲ್ಪಟ್ಟಿರುವ ಅಕ್ಷರಗಳ ಸಂಖ್ಯೆಗಳಿಗೆ ಅರ್ಥವು— ಕ ೧, ಅಂದರೆ ಒಂದೇ ೭ ರ೨, ಅಂದರೆ|, ಗ೩, ಅಂದರೆ|೭ ಈ ಮೇರೆ ಯೆಲ್ಲಾ ಸಂಖ್ಯೆಗಳನ್ನು ನೋಡಿಕೊಳ್ಳತಕ್ಕದ್ದು. ಆದರೆ ಯಾವ ತಿಂಗಳಲ್ಲಿ ಪಾದಚ್ಛಾಯೆ ನೋಡಬೇಕಾಗಿರುತ್ತದೋ ಆ ತಿಂಗಳನ್ನು ನೋಡಿಕೊಂಡು ಯಾವ ೧೦ ತೇದಿಗಳಿಗೆಯಾವ ಅಕ್ಷರಹೇಳಲ್ಪಟ್ಟಿದೆಯೋ ಆ ಅಕ್ಷರಕ್ಕೆ ಯೆಷ್ಟುಬೆಳೆಯಾಗುತ್ತವೊ ಅದರನ್ನು ಮೊತ್ತದಲ್ಲಿ ಅರ್ಧ ಅಡಿಯನ್ನು ಸಹ ಪಾದಚ್ಛಾಯೆ ಅಡಿಗಳಲ್ಲಿ ತೆಗದುಬಿಟ್ಟು ಉಳಿದ ಅಡಿಗಳನ್ನು ನೋಡಿಕೊಳ್ಳತಕ್ಕದ್ದು.

ಪಾದಚ್ಛಾಯ ಅಡಿಗಳಿಗೆ ಘಳಿಗೆ ನೋಡುವಕ್ರಮವು॥

ಶ್ಲೋ॥ನವತ್ಯಷ್ಟಪದಾದೇಕಾನಾಡಿಕಾತತ್ರವುಚ್ಯತೆ| ಪಂಚಾರ್ಧಕಾಕೆ

ತ್ವಾರಿಂಶದ್ವೇಕಷಷ್ಟಿಃ ತ್ರಿಂಶತ್ರಯಸ್ತಥಾ॥ ಏಕೋನವಿಂಶತ್ತತ್ವಾರಿಚತುರ್ದ
ಶ್ಯಾಂ ತ್ರಿಪಂಚಕಂ। ದಶಾರ್ಧೇನಾತಿಕಾ ಷಟ್ಚ ಅಷ್ಟಕೇ ಸಪ್ತನಾಡಿಕಾಃ ।
ಷಟ್ಪದೇ ಚಾಷ್ಟಕಂ ವಿದ್ಯಾತ್ ಪಂಚರ್ಧೇ ನವಸಂಖ್ಯಕಂ। ತ್ರಿಕಾರ್ಧೇ ದಶಕಂ
ವಿದ್ಯಾತ್ ದ್ವಿಪಾದೇ ಏಕಾದಶಸ್ತಥಾ। ಏಕತ್ರಿ ಪಾದೊದ್ವಾದಶಕಂ ಪಾದಮೇ
ಕಂ ತ್ರಯೋದಶ। ಚತುರ್ಥಾಂಶೇ ಚತುರ್ದಶ ಶೂನ್ಯೇ ಪಂಚದಶಸ್ತಥಾ॥

ಟೀ॥ ೯೮ ಅಡಿಗೆ ೧ ಘಳಿಗೆ, ೩೫॥ ಅಡಿಗೆ ೨ ಘಳಿಗೆ, ೨೮ ಅಡಿಗೆ ೩ ಘಳಿಗೆ, ೧೯ ಅಡಿಗೆ ೪ ಘಳಿಗೆ, ೧೫ ಅಡಿಗೆ ೫ ಘಳಿಗೆ, ೧೦॥ ಅಡಿಗೆ ೬ ಘಳಿಗೆ, ೮ ಅಡಿಗೆ ೭ ಘಳಿಗೆ, ೬ ಅಡಿಗೆ ೮ ಘಳಿಗೆ, ೪॥ ಅಡಿಗೆ ೯ ಘಳಿಗೆ, ೩॥ ಅಡಿಗೆ ೧೦ ಘಳಿಗೆ, ೨॥ ಅಡಿಗೆ ೧೧ ಘಳಿಗೆ, ೧॥ ಅಡಿಗೆ ೧೨ ಘಳಿಗೆ, ೧ ಅಡಿಗೆ ೧೩ ಘಳಿಗೆ, ॥ ಅಡಿಗೆ ೧೪ ಘಳಿಗೆ, ಶೂನ್ಯವಾದರೆ ೧೫ ಘಳಿಗೆ, ಆದರೆ ವರರುಚಿಮತಕ್ಕೂ ಈ ಗ್ರಂಥಕರ್ತನ ಮತಕ್ಕೂ ವಿಶೇಷ ವ್ಯತ್ಯಾಸ ವಿಲ್ಲ ವಾದ್ದರಿಂದಲೂ ಸುಲಭವಾಗಿರುವದ್ದರಿಂದ ಇಲ್ಲಿ ಬರೆಯಲ್ಪಟ್ಟಿತು.

ರಾತ್ರಿಕಾಲದಲ್ಲಿ ಘಟಿಕಾ ಪ್ರಮಾಣವನ್ನು ತಿಳಿದು ಕೊಳ್ಳುವದಕ್ಕೋಸ್ಕರ ನಕ್ಷತ್ರ ಸ್ವರೂಪಗಳನ್ನು ಹೇಳುತ್ತಾನೆ.

ವರರುಚಿವಾಕ್ಯಗಳು.

ತುರಗಮುಖಾಶ್ವಿನೀತ್ರೀಣಿ।ಭರಣಿಯೋನಿತ್ರೀಣಿ। ಕೃತ್ತಿಕಾಕ್ಷುರಾಷಟ್ಕಂ। ಶಕಟಂಪಂಚರೋಹಿಣೀ। ಮೃಗಶಿರಾಶೀರ್ಷತ್ರಯಂ। ಆದ್ರಾರ್ಪ್ರವಾಳಮೇಕಂ॥ ಪುನರ್ವಸುಕುಲಾಲಚಕ್ರಂಪಂಚ । ಸದೃಶಾಪುಷ್ಯಮೀತ್ರೀಣಿ । ಆಶ್ಲೇಷಾಸರ್ಪರುತು। ಮಖಾಂದೋಳಿಕಾಪಂಚ। ಪುಬ್ಬಉತ್ತರನೇತ್ರದ್ವಯೋಃ। ಹಸ್ತಪಾಣಿನಾಪಂಚ।ಚಿತ್ತಾಮೌಕ್ತಿಕಮೇಕಂ।ಸ್ವಾತಿಮಾಣಿಕ್ಯಮೇಕಂ। ವಿಶಾಖಾಕುಲಾಲಚಕ್ರಪಂಚ। ಅನೂರಾಧಾಜ್ಯೇಷ್ಠಾಂಗುಳಿಛತ್ರಾಕಾರತ್ರಯಂ।ಮೂಲಾಕುಪ್ಪೆಕ್ಕೇಸರೀಸಂಚ। ಪೂರ್ವಾಷಾಢಉತ್ತರಾಷಾಢದ್ವೆದ್ವೆಚತುಷ್ಕಂ। ಶ್ರವಣಾಮಚ್ಛಾಕಾರತ್ರಯಂ । ಧನಿಷ್ಠಾಶೀರ್ಷತ್ರಯಂ। ಶತಭಿಷಕ್ಛತತಾರಯೊಃ।ಪೂರ್ವಾಭಾದ್ರ ಉತ್ತರಾಭಾದ್ರದ್ವೆದ್ವೆಖಟ್ವಾಂ। ರೇವತೀಮತ್ಸ್ಯಾಕಾರತ್ರಯಂ। ಈ ೨೭ ನ್ನು ನಕ್ಷತ್ರಸ್ವರೂಪಗಳು, ಹ್ಯಾಗಂದರೆ,—

ಟೀ ॥ ಅಶ್ವಿನಿ ಕುದರೆ ಮುಖದಂತೆ ೩ ನಕ್ಷತ್ರಗಳು ಸೇರಿ ಇರುವದು, ಭರಣೀ ತ್ರಿಕೋಣಾಕಾರವಾಗಿ ೩ ನಕ್ಷತ್ರಗಳು, ಕೃತ್ತಿಕೆ ಹಜಾಮನ ಕತ್ತಿಯಂತೆ ೬ ಸಂಣ ನಕ್ಷತ್ರಗಳು, ರೋಹಿಣೀ ಚಕ್ರಾಕಾರವಾಗಿ ೫ ನಕ್ಷತ್ರಗಳು, ಮೃಗಶಿರ ಮೃಗದ ತಲೆಯಂತೆ ೩ ನಕ್ಷತ್ರಗಳು, ಆದ್ರಾರ್ ದೊಡ್ಡ ಹವಳದಂತ ೧ ನಕ್ಷತ್ರ, ಪುನರ್ವಸು ಕುಂಬಾರ ಚಕ್ರದಂತೆ ೫ ನಕ್ಷತ್ರಗಳು,

ಪುಷ್ಯ ತೊಣ್ಣೇಕೇತದಂತೆ ೩ ನಕ್ಷತ್ರಗಳು, ಇದನ್ನೇ ಕೆರೇಕಟ್ಟೆಯಂತೆ ಕೆಲವರು ಹೇಳುವರು, ಆಶ್ಲೇಷಾ ಸರ್ಪದಂತೆ ೬ ನಕ್ಷತ್ರಗಳು, ಮಖಾ ಪಾಲಕಿದಂಡಿಯಂತೆ ೫ ನಕ್ಷತ್ರಗಳು, ಪೂರ್ವ-ಕಣ್ಣುಗಳಂತೆ ೨ ನಕ್ಷತ್ರಗಳು, ಉತ್ತ-ರಾಗೆಯೇ ೨ ನಕ್ಷತ್ರಗಳು, ಹಸ್ತ—ಕೈ ಬೆರಳಂತೆ ೫ ನಕ್ಷತ್ರಗಳು, ಚಿತ್ರಾ ಮುತ್ತಿನಂತೆ ೧ ನಕ್ಷತ್ರವು, ಸ್ವಾತೀ ಮಾಣಿಕ್ಯದಂತೆ ೧ ನಕ್ಷತ್ರವು, ವಿಶಾಖಾ ಕುಂಬಾರನ ಚಕ್ರಾಕಾರವಾಗಿ ೫ ನಕ್ಷತ್ರಗಳು, ಅನೂರಾಧಾ ಜ್ಯೇಷ್ಠಾ ಇವೆರಡೂ ಛತ್ರದಂತೆ ೩-೩ ನಕ್ಷತ್ರಗಳು, ಮೂಲಾ ಸಿಂಹಾಕಾರವಾಗಿ ೫ ನಕ್ಷತ್ರಗಳು, ಪೂರ್ವಾಷಾಢಾ ೪ ನಕ್ಷತ್ರಗಳು, ಉತ್ತರಾಷಾಢಾ ೮ ನಕ್ಷತ್ರಗಳು, ಶ್ರವಣ ಮತ್ಸ್ಯಾಕಾರವಾಗಿ ೩ ನಕ್ಷತ್ರಗಳು, ಧನಿಷ್ಠಾ ತಲೆಯಂತೆ ೩ ನಕ್ಷತ್ರಗಳು. ಶತಭಿಷಕ್ ನೂರುನಕ್ಷತ್ರಗಳು ಸೇರಿ ಪುಷ್ಪದಂತಿರುವದು. ಪೂಭಾ ಉತ್ತರಾಭಾದ್ರಾ, ಇವೆರಡೂ ಮಂಚದಕೋಡುಗಳಂತೆ-೨-೨-ಆಗಿ ೪ ನಕ್ಷತ್ರಗಳು, ರೇವತೀ ಮತ್ಸ್ಯಾಕಾರವಾಗಿ ೩ ನಕ್ಷತ್ರಗಳು, ಈ ಮೇರೆ ನಕ್ಷತ್ರಸ್ವರೂಪವನ್ನು ತಿಳಿದು ಅವುಗಳು ಉಚ್ಚವಾದಾಗ ರಾತ್ರಿಯಲ್ಲಿ ಘಟಿಕಾ ನಿರ್ಣಯ ಮಾಡತಕ್ಕದ್ದು.

ಮೂ॥ ಜ್ಯೇಷ್ಠಾದೀನಾಮತಿಕ್ರಮ್ಯ ಪೌಷ್ಣಾದೀನಾಮುದಾಗಮೇ।
ಆದ್ರಾರ್ದೀನಾಂಸಮಂಕುರ್ಯಾನ್ನಷಟ್ಕಾದ್ವಿದಶಕ್ರಮಾತ್॥

ಟೀ॥ ಜ್ಯೇಷ್ಠಾದಿ ೯ ನಕ್ಷತ್ರಗಳು ಉಚ್ಚವಾಗಿ ಸ್ವಲ್ಪಜರಿಗಿದ ತರುವಾಯ ಈ ರೇವತೀ ಮೊದಲು ೬ ನಕ್ಷತ್ರಗಳು ಉಚ್ಚಕ್ಕೆ ಬರುವದಕ್ಕೆ ಸ್ವಲ್ಪ ಮುಂದಾಗಿಯೂ, ಆರ್ದ್ರ ಮೊದಲು ೧೨ ನಕ್ಷತ್ರಗಳು ಸರಿಯಾಗಿ ಉಚ್ಚದಲ್ಲಿರುವಾಗಲೂ ಘಟಿಕಾ ನಿರ್ಣಯ ಮಾಡತಕ್ಕದ್ದು.

### ಉಚ್ಚವಾದ ನಕ್ಷತ್ರಗಳ ದೆಸೆಯಿಂದ ಮೇಷಾದಿರಾಶಿಗಳ ಘಟಿಕೆಗಳಲ್ಲಿ ಕಳೆದ ಘಳಿಗೆಗಳನ್ನು ತಿಳಿದುಕೊಳ್ಳುವಕ್ರಮ

ಇಲ್ಲಿ-ಶ್ರೋಣಾಮೇಷೇರತಾಯೆಂಬ ವಾಕ್ಯ ಮೊದಲು ಉತ್ತರಾಷಾಢಾ ಮೀನೇ ಗಾಥಾ ಯೆಂಬ ವಾಕ್ಯದ ವರಿಗೆ ಪ್ರತಿವಾಕ್ಯ ದಲ್ಲಿಯೂ ಹೇಳಲ್ಪಟ್ಟ ೨-೨-ಅಕ್ಷರಗಳಲ್ಲಿ ಮೊದಲು ಅಕ್ಷರ ಘಟಿಕೆಯ ಸಂಖ್ಯೆ ಯೆಂಬದಾಗಿಯೂ ೨ ನೇ ಅಕ್ಷರ ಪಳೆ ಸಂಖ್ಯೆ ಯೆಂಬದಾಗಿಯೂ ತಿಳಿಯತಕ್ಕದ್ದು.

### ವರರುಚಿವಾಕ್ಯಗಳು.

ಶ್ರೋಣಾಮೇಷೇರತಾ। ಶ್ರವಿಷ್ಠಾವೃಷಭೇನಭ। ಶತಭಿಷಗ್ವೃಷಭೇರಾಮಃ।
ಪ್ರೋಷ್ಠಪದಾಮ್ಮಿಥುನೇಪರಃ। ಅಹಿರ್ಬುಧ್ನ್ಯೇಮಿಥುನೇಭಾನುಃ। ರೇವತೀಕರ್ಕೇ
ಯಜ್ಞಃ। ಅಶ್ವಿನೀಕರ್ಕೇರೂಪ। ಭರಣೀಕರ್ಕೇಶಾಬ್ದ। ರೋಹಿಣೀಸಿಂಹೇ
ಗುರುಃ। ಕೃತ್ತಿಕಾಸಿಂಹೇಕಾಯ। ಮೃಗಶಿರಾಕನ್ಯಾನೇಯ। ಆದ್ರಾರ್ಕನ್ಯಾ

ಯುತಾ|ಪುನರ್ವಸುತುಲಾನಿಲಃ| ಪುಷ್ಯಸ್ತುಲಾರಾಮಃ | ಆಶ್ಲೇಷಾ
ತುಲಾಭೋಗಿ | ಮಖಾವೃಶ್ಚಿಕೇಕಲ | ಫಲ್ಗುನೀವೃಶ್ಚಿಕೆಲತಾ | ಉತ್ತ
ರಾಧನುಸ್ಸರ್ಪಃ| ಹಸ್ತಾ ಧನುರ್ಬಲಾ| ಚಿತ್ರಾ ಧನುಶ್ಚರೈಃ| ಸ್ವಾತೀಮ
ಕರೆಕಾಮ|ವಿಶಾಖಾಮಕರೇವಸಂ|ಅನೂರಾಧಃಕುಂಭೆನಾಸಿಃ|ಜ್ಯೇಷ್ಠಂ
ಕುಂಭೆಕಥಾ|ಮೂಲಂಕುಂಭೆಗಜ|ಪೂರ್ವಾಷಾಢಾಮೀನೇಕವಿಃ|ಉತ್ತ
ರಾಷಾಢಾಮೀನೇಗಾಥಾ||

ಟೀ|| ಶ್ರವಣನಕ್ಷತ್ರ ಪುಚ್ಛವಾದರೆ ಮೇಷಲಗ್ನದಲ್ಲಿ ೩೫| ಘಳಿಗೆ ಕಳಿಯಬೇಕಾದಾಗಿಯು, ಧನಿಷ್ಠಾ ನಕ್ಷತ್ರಕ್ಕೆ ವೃಷಭದಲ್ಲಿ ೫ ಶತಭಿಷಕ್ ನಕ್ಷತ್ರಕ್ಕೆ ವೃಷಭದಲ್ಲಿ ೨||=, ಪೂಭಾಗೆ ಮಿಥುನದಲ್ಲಿ ೧|, ಉಭಾಗೆ ಮಿಥುನದಲ್ಲಿ ೪, ರೇವತಿಗೆ ೧||=, ಅಶ್ವಿನಿಗೆ ಕಟಕದಲ್ಲಿ ೨=, ಭರಣಿಗೆ ಕಟಕದಲ್ಲಿ ೫|=, ಕೃತ್ತಿಕೆಗೆ ಸಿಂಹದಲ್ಲಿ ೧=, ರೋಹಿಣಿಗೆ ಸಿಂಹದಲ್ಲಿ ೩|, ಮೃಗಶಿರಕ್ಕೆ ಕನ್ಯೆಯಲ್ಲಿ=, ಆರ್ದ್ರೆಗೆ ಕನ್ಯೆಯಲ್ಲಿ ೧|||, ಪುನರ್ವಸುವಿಗೆ ತುಲೆಯಲ್ಲಿ |=, ಪುಷ್ಯಕ್ಕೆ ೨|= ಆಶ್ಲೇಷಕ್ಕೆ ತುಲೆಯಲ್ಲಿ ೪|=, ಮಖಗೆ ವೃಶ್ಚಿಕದಲ್ಲಿ ೧|=, ಪೂರ್ವಫಲ್ಗುನಿಗೆ ವೃಶ್ಚಿಕದಲ್ಲಿ ೩|||, ಉತ್ತರಫಲ್ಗುನಿಗೆ ಧನುಸ್ಸಿನಲ್ಲಿ೫=, ಹಸ್ತಕ್ಕೆ ಧನುಸ್ಸಿನಲ್ಲಿ ೩|=, ಚಿತ್ರೆಗೆ ಧನುಸ್ಸಿನಲ್ಲಿ ೫|, ಸ್ವಾತಿಗೆ ಮಕರದಲ್ಲಿ ೧೫=, ವಿಶಾಖೆಗೆ ಮಕರದಲ್ಲಿ ೪, ಅನೂರಾಧೆಗೆ ಕುಂಭದಲ್ಲಿ ||, ಜ್ಯೇಷ್ಠೆಗೆ ಕುಂಭದಲ್ಲಿ ೧|||=, ಮೂಲಕ್ಕೆ ಕುಂಭದಲ್ಲಿ ೩|||=, ಪೂರ್ವಾಷಾಢಕ್ಕೆ ಮೀನದಲ್ಲಿ ೧||, ಉತ್ತರಾಷಾಢಕ್ಕೆ ಮೀನದಲ್ಲಿ ೩|||=, ಈಮೇರೆ ಆಯಾ ನಕ್ಷತ್ರಗಂಡವಾದರೆ ಆಯಾರಾಶಿಗಳಲ್ಲಿ ಅಷ್ಟಷ್ಟು ಘಳಿಗೆಗಳು ಕಳೆದವೆಂದು ತಿಳಿಯತಕ್ಕದ್ದು.

ಸಂಸ್ಕಾರಪ್ರಕರಣವು ಸಂಪೂರ್ಣವಾಯಿತು.

---

ಶ್ರೀರಸ್ತು.

## ಜಾತಕವರ್ಗಾದಿಮುಹೂರ್ತಪ್ರಕರಣವು.

---

### ಅದರಲ್ಲಿ ಜಾತಕರ್ಮ ಪ್ರಕರಣವು

ಮೂ|| ಮುಖಾವಲೋಕೇನ ಸುತಸ್ಯ ಜೀವತಃ ಪಿತಾವಿಮುಚ್ಯೇತಯತ
ಸ್ತದರ್ಣತಃ| ತತಃಕ್ಷಣಾದೀನ್ವಿಗಣಯ್ಯತತ್ಕ್ಷಣಂವಿಧೀಯತೆಜನ್ಮ
ವಿಧಿಸ್ತತೋದಯೆ||

ಟೀ|| ಮಗುಹುಟ್ಟಿ ಬದಿಕಿರುವಾಗ ತಂದೆಯು ಆದರ ಮುಖವನ್ನು ನೋ

ತಿದ ಮಾತ್ರದಿಂದಲೇ ಪಿತೃಗಳ ಋಣದಿಂದ ಮುಕ್ತನಾಗ ತ್ತಾನೆ ಆದ್ದರಿಂದ ಪುತ್ರನು ಹುಟ್ಟಿದ ಮಾತ್ರದಿಂದಲೇ ತಂದೆಯು ಅವನಿಗೆ ಜಾತಕರ್ಮ ವನ್ನು ಮಾಡಬೇಕು.

ಮೂ॥ ಪುತ್ರಜನ್ಮನಿ ಯಜ್ಞೇಚ ತಥಾಸಂಕ್ರಮಣೇರವೇಃ।
ರಾಹೋಃಪ್ರದರ್ಶನಸ್ನಾನಂ ಪ್ರಶಸ್ತಂ ನಾನ್ಯನಾನಿಶಿ॥

ಟೀ॥ ಮಗನು ಹುಟ್ಟಿದಾಗಲು, ಯಜ್ಞದಲ್ಲಿಯೂ, ಸೂರ್ಯಸಂಕ್ರಮಣದಲ್ಲಿಯೂ, ಗ್ರಹಣದಲ್ಲಿಯೂ, ರಾತ್ರಿಕಾಲದಲ್ಲಿ ಸ್ನಾನ ಮಾಡತಕ್ಕದ್ದೇ ಹೊರ್ತು ಇತರ ಕಾಲದಲ್ಲಿ ಸ್ನಾನ ಮಾಡಕೊಡದು.

ಮೂ॥ ಗ್ರಹಣೋದ್ವಾಹಸಂಕ್ರಾಂತಿಯಾತ್ರಾಸುಪ್ರಸವೇಸುಚ।
ದಾನಂ ನೈಮಿತ್ತಿಕಂಜ್ಞೇಯಂ ರಾತ್ರಾವಪಿನದೂಷ್ಯತಿ॥

ಟೀ॥ ಗ್ರಹಣ, ವಿವಾಹ, ಸಂಕ್ರಾಂತಿ, ಪ್ರಯಾಣ, ಪುತ್ರೋತ್ಪತ್ತಿ, ಇವುಗಳ ಈ ಕಾಲಗಳಲ್ಲಿ ರಾತ್ರೀಕಾಲದಲ್ಲಿಯೂ ದಾನ ಮಾಡತಕ್ಕದ್ದು.

ಮೂ॥ ಯಾವನ್ನಚ್ಛಿದ್ಯತೇನಾಳಂ ತಾವನ್ನಾಪ್ನೋತಿಸೂತಕಂ।
ಛಿನ್ನೇನಾಳೇತತಃಪಶ್ಚಾತ್ಸೂತಕಂತುವಿಧೀಯತೇ॥

ಟೀ॥ಯೆಷ್ಟರವರಿಗೂ ನಾಳವು ಕೊಯ್ಯಲ್ಪಡುವದಿಲ್ಲವೋ ಅಷ್ಟರವರಿಗೂ ಸೂತಕವಿಲ್ಲವು.

ಮೂ॥ ದೃಷ್ಟ್ವಾತತಶ್ಚ ವಿಧಿವತ್ಸಚೇಲಸ್ನಾನಮಾಚರೇತ್।
ದತ್ವಾಗೋಭೂಹಿರಣ್ಯಾದಿ ಪಶ್ಚಾಲ್ಲಗ್ನಂನಿರೀಕ್ಷಯೇತ್॥

ಟೀ॥ ನಾಳವು ಕೊಯ್ಯಲ್ಪಟ್ಟ ತರುವಾಯ ಶಿಶುವಿನ ಮುಖ ನೋಡಿ ಉಟ್ಟದ್ದವಸ್ತ್ರದೊಂದಿಗೆ ಸ್ನಾನಮಾಡಿ, ಗೋದಾನ, ಭೂದಾನ, ಧಾನ್ಯದಾನ ಇವುಗಳನ್ನು ಮಾಡಿ ತರುವಾಯ ಅಗ್ನಿಯನ್ನು ನೋಡಬೇಕು.

ಮೂ॥ ತಸ್ಮಿನ್ ಜನ್ಮ ಮುಹೂರ್ತೇಪಿಸೂತಕಾಂತೇಥವಾಶಿಶೋಃ॥
ಜಾತಕರ್ಮಚಕರ್ತವ್ಯಂ ಪಿತೃಪೂಜನತತ್ಪರೈಃ॥

ಟೀ॥ ಮಗು ಹುಟ್ಟಿದಕಾಲದಲ್ಲಾದರೂ, ಸೂತಕ ತೀರಿದ ತರುವಾಯ೧೧ನೇ ದಿವಸದಲ್ಲಾದರೂ ಮಗುವಿಗೆ ಜಾತಕರ್ಮ ಮಾಡಬೇಕು.

ನಾಮಕರಣವು

ಮೂ॥ ನಾಮಕರ್ಮದಶಮೇಥವಾಹನಿದ್ವಾದಶೇಶುಭಿಮಾಪಿಧೀಯತೇ।
ಸ್ವೋಚ್ಚಮಿತ್ರಭವನೇಷುಸದ್ಗ್ರಹಾಸ್ಸದೃಶೈರ್ಯದಿವಿಲೋಕಿತಾಶ್ಶುಭೈಃ॥

ಟೀ॥ಮಗುಹುಟ್ಟಿದ ೧೦ನೇ ದಿವಸದಲ್ಲಾದರೂ, ೧೨ನೇದಿವಸದಲ್ಲಾದರೂ, ಶುಭಗ್ರಹಗಳು ಸ್ವಕ್ಷೇತ್ರ, ಉಚ್ಚಸ್ಥಾನ, ಮಿತ್ರಕ್ಷೇತ್ರಗಳಲ್ಲಿರುವಾಗಲು, ಅಥವಾ ಶುಭಗ್ರಹಗಳಿಂದನೋಡಲ್ಪಟ್ಟಿದ್ದರೂ ಶುಭದಿನಗಳಲ್ಲಿಶಿಶುವಿಗೆನಾಮ

ಕರಣವನ್ನು ಮಾಡತಕ್ಕದ್ದು. ... ... ...

ತರುವಾಯ ನಾಮಕರಣ ಕಾಲವನ್ನು ಹೇಳುತ್ತಾನೆ.

ಮೂ॥ಜಾತಾನಂತರಮೇವನಾಮಕರಣಂತ್ವೇಕಾದಶಾಹೇಸ್ಫುಟಂ|ಪುತ್ರ ಸ್ಯೈವಸಮಾಕ್ಷರಂತುಯುವತೇಃಕಾರ್ಯಂತತೋನ್ಯಕ್ಷಯಂ|ಶುದ್ಧಿ ಜಾತಕವಚ್ಚ ನಾಮ್ನಿ ಸಕಲೈಸ್ತ್ವದ್ವಾದಶೇಷೋಡಶೇ| ದ್ವಾವಿಂಶೇಪ್ಯಥವಿಂಶಕೇ ಹ್ನಿವಿಹಿತಂಜಾತಿವ್ಯವಸ್ಥಾಂವಿನಾ ॥

ಟೀ॥ ಮಗನು ಹುಟ್ಟಿದ ಕ್ಷಣದಲ್ಲೇ ಅವನು ಯಾವನಕ್ಷತ್ರದಲ್ಲಿ ಹುಟ್ಟುತ್ತಾನೋ ಆ ನಕ್ಷತ್ರದ ಹೆಸರಿನಿಂದ ಶಿಶುವಿಗೆ ರಹಸ್ಯವಾಗಿ ನಾಮಧೇಯವನ್ನಿಟ್ಟು, ತರುವಾಯ ೧೧ನೇ ದಿನದಲ್ಲಿ ಬಹಿರಂಗವಾಗಿ ನಾಮಕರಣವನ್ನು ಮಾಡತಕ್ಕದ್ದು ಹ್ಯಾಗಂದರೆ;-ಅಶ್ವಿನಿಯಲ್ಲಿ ಹುಟ್ಟಿದ ಶಿಶುವಿಗೆ ಅಶ್ವಿನನು, ಕೃತ್ತಿಕೆಯಲ್ಲಿ ಹುಟ್ಟಿದ್ದಕ್ಕೆ ಕಾರ್ತೀಕನು, ರೋಹಿಣಿಯಲ್ಲಿ ಹುಟ್ಟಿದ್ದಕ್ಕೆ ರೌಹಿಣನು, ಮೃಗಶೀರ್ಷದಲ್ಲಿ ಹುಟ್ಟಿದ್ದಕ್ಕೆ ಮಾರ್ಗಶೀರ್ಷನು, ಮಘೆಯಲ್ಲಿ ಹುಟ್ಟಿದ್ದಕ್ಕೆ ಮಾಘನು, ಈ ಮೇರೆ ೨೭ ನಕ್ಷತ್ರಗಳಿಗೂ ತಕ್ಕ ನಾಮಗಳನ್ನಿಡತಕ್ಕದ್ದು ಮತ್ತು ಹುಟ್ಟಿದ್ದು ಗಂಡುಶಿಶುವಾದರೆ ಹೆಸರು ಸಮಾಕ್ಷರವಾಗಿ ಶಿವ, ರಾಮ, ಕೃಷ್ಣ, ಲಿಂಗ, ನೀಲಕಂಠ, ರಾಮಚಂದ್ರ, ಮಹಾದೇವ ಎಂಬದಾಗಿಯೂ, ಹೆಣ್ಣುಮಗುವಾದರೆ ಕಮಲಾ, ಪಾರ್ವತೀ,ಸುಂದರೀ,ಜಾನಕೀ,ಕನಕವಲ್ಲಿ, ನೀಲಾಯತಾಕ್ಷಿಯೆಂದು ವಿಷಮಾಕ್ಷರವಾಗಿಯೂ, ನಾಮಕರಣವ ಮಾಡಬೇಕು. ಈ ನಾಮಕರಣಕ್ಕೆ ಲಗ್ನ ಶುದ್ಧಿ ಮೊದಲಾದವುಗಳು ಜಾತಕರ್ಮದಂತೆಯೇ ತಿಳಿಯಬೇಕು, ೧೧ನೇ ದಿನದಲ್ಲಿ ನಾಮಕರಣ ಮಾಡದೇಹೋದ ಪಕ್ಷದಲ್ಲಿ ಬ್ರಾಹ್ಮಣಾದಿ ನಾಲ್ಕು ವರ್ಣದವರಿಗೂ ವೃದ್ಧಿಯ ಆಶೌಚವು ೧೦ದಿನಗಳವರಿಗೂ ಯೆಂಬದಾಗಿ ಶಾಸ್ತ್ರವಿರುವದರಿಂದ ಜಾತಿಭೇದವಿಲ್ಲದೆ ವರ್ಣದವರೂ ಪ್ರಸವವಾದ ೧೨--೧೬--೨೦--೨೨ ಈ ದಿನಗಳಲ್ಲಿ ನಾಮಕರಣವನ್ನು ಮಾಡತಕ್ಕದ್ದೆಂದು ಭಾವವು.

ಮೂ ॥ ಮಿತ್ರಾದಿತ್ಯಮಖೋತ್ತರಾಶತಭಿಷಕ್ಸ್ವಾತೀಧನಿಷ್ಠಾಚ್ಯುತೇ ಪ್ರಾಜೇಶಾಶ್ವಿಶಶಾಂಕಪೌಷ್ಣದಿನಕೃತ್ಸ್ವಷ್ಯೇಷುರಾಶೌಸ್ಥಿರೇ॥ಛಿದ್ರಾನ್ವಂಚದಶೀಂವಿಹಾಯನವಮೀಂಶುದ್ಧೇಷ್ಟಮೇಭಾರ್ಗವೇ ಜ್ಞೇಜೀವ್ಯೇಸ್ಮೃತೇ ಪಾರವಾರದಿವಸೇನಾಮಾನಿಕುರ್ಯಾಚ್ಛಿಶೋಃ॥

ಟೀ॥ ಅನೂರಾಧಾ, ಪುನರ್ವಸು, ಮಘಾ, ಉತ್ತರಾ, ಉಷಾ,ಉಭಾ, ಶತಭಿಷಕ್, ಸ್ವಾತಿ, ಧನಿಷ್ಠಾ, ಶ್ರವಣ,ರೋಹಿಣಿ,ಅಶ್ವಿನೀ,ಮೃಗಶೀರ್ಷಾ, ರೇವತೀ, ಹಸ್ತ. ಪುಷ್ಯ ಈ ನಕ್ಷತ್ರಗಳಲ್ಲಿಯೂ, ಸ್ಥಿರರಾಶಿಯಲ್ಲುತ್ತಮ, ಪಕ್ಷಚ್ಛಿದ್ರವನ್ನೂ ಪೌರ್ಣಮಾವಾಸ್ಯೆಯನ್ನೂ ನವಮಿಯನ್ನೂ ಬಿಟ್ಟು ಆ

ಷ್ಟಮಶುದ್ಧಿ ಇರುವಾಗಲು ಶುಕ್ರ ಬುಧ ಗುರು ಸೋಮ ಕುಜ ವಾರಗಳ ಲ್ಲಿಯೂ ಶಿಶುವಿಗೆ ನಾಮಕರಣವನ್ನು ಮಾಡತಕ್ಕದ್ದು.

ಮೂ ॥ ದೈವಪೂರ್ವಂನರ-ಖ್ಯಾಂಹಿಶರ್ಮವರ್ಮಾನುಭಾವತಃ। ಸು ಶ್ರೀಯುತಂನಾಮಪೂರ್ವಂರಶಾಂಕಂಸುಮನೋಕ್ಷರೈಃ॥

ಟೀ॥ ಮಗುವಿಗೆ ದೈವವಾಚಕ ಶಬ್ದ ಮೊದಲಾಗಿ ಶ್ರೀಕಾರಸಹಿತವಾಗಿಸಂ ಸ್ಕೃತಾಕ್ಷರಗಳಿಂದ ಬ್ರಾಹ್ಮಣಾದಿ ವರ್ಣಗಳಿಗೆ ಹೆಸರುಗಳನ್ನು ಶರ್ಮ, ವ ರ್ಮ,ಗುಪ್ತ, ಯೆಂಬ ಅಕ್ಷರಗಳ ಕೊನೇವರಿಗೆ ಕೈಯಿಂದಬರಿಯುತಕ್ಕದ್ದು.

ಮೂ॥ಕೃಷ್ಣೋನಂತೋಚ್ಯುತಶ್ಚಕ್ರೀವೈಕುಂಠೋಥಜನಾರ್ದನಃ । ಉಪೇಂದ್ರಯಜ್ಞಪುರುಷೋವಾಸುದೇವಸ್ತಥಾಹರಿಃ॥ಗೋವಿಂದಃಪುಂಡ ರೀಕಾಕ್ಷೋಮಾಸನಾಮಾನ್ಯನುಕ್ರಮಾತ್ । ಕೇಚಿನ್ನಕ್ಷತ್ರನಾಮಾನಿ ಕುರ್ವಂತಿವಿದಿತಾಗಮಾ॥

ಟೀ ॥ ಹುಟ್ಟಿದ ಮಗುವಿಗೆ ಚೈತ್ರ ಮೊದಲ್ಗು ಮೀನ ಮಾಸದವರಿ ಗೆ ಕ್ರಮವಾಗಿ ಕೃಷ್ಣನು. ಅನಂತನು, ಅಚ್ಯುತನು, ಚಕ್ರಿಯು, ವೈಕುಂಠ ನು, ಜನಾರ್ದನನು, ಉಪೇಂದ್ರನು, ಯಜ್ಞಪುರುಷನು, ವಾಸುದೇವನು, ಹರಿಗೋವಿಂದನು, ಪುಂಡರೀಕಾಕ್ಷನು, ಈ ೧೨ ಹೆಸರನ್ನು ಇಡತಕ್ಕದ್ದು ಇದು ಮಾಸ ನಾಮಗಳು, ಕೆಲವರು ನಕ್ಷತ್ರನಾಮಗಳನ್ನು ಇಡುತ್ತಾರೆ, ಅಂದರೆ ಇಲ್ಲಿ ಹೇಳಲ್ಪಟ್ಟ ಕೃಷ್ಣಾದಿ ನಾಮಗಳಲ್ಲಿ ಒಂದನ್ನು ಶಿಶುವಿಗೆ ಇ ಟ್ಟು ಆ ಶಿಶುವು ಯಾವ ತಿಂಗಳಲ್ಲಿಯೂ ಯಾವ ನಕ್ಷತ್ರದಲ್ಲಿಯೂಹುಟ್ಟಿತೋ ಅವುಗಳ ನಾಮವನ್ನು ಕೊನೆಯಲ್ಲಿ ಶೇರಿಸತಕ್ಕದ್ದು

ಹೆಣ್ಣು ಮಕ್ಕಳಿಗೆ ಹ್ಯಾಗೆಂದರೆ.

ಮೂ॥ಮಾರ್ಗಶೀರ್ಷೆಚವಾಗ್ದೇವೀಪುಷ್ಯೆಪದ್ಮಾವತೀಭವೇತ್ । ಶ್ರೀದೆ ವೀಚೈವಸಾವಿತ್ರೀಭೂಮಿಃಕಲ್ಯಾಣಿಕಾಸ್ಮೃತಾ।ಸತ್ಯಭಾಮೋಪುಣ್ಯಾ ವತೀರೂಪಿಣೀಚೆಂದುಮತ್ಯಪಿ।ಚಂದ್ರಾವತೀಚಲಕ್ಷ್ಮೀಚಸ್ತ್ರೀನಾಮ ಕರಣೇವಿಧುಃ॥

ಟೀ॥ ಹೆಣ್ಣುಮಕ್ಕಳಿಗೆ ಮಾರ್ಗಶಿರ ಮಾಸದಲ್ಲಿ ವಾಗ್ದೇವಿ, ಪುಷ್ಯಮಾಸ ದಲ್ಲಿ ಪದ್ಮಾವತೀ, ಮಾಘಮಾಸದಲ್ಲಿ ಶ್ರೀ ದೇವಿ, ಫಾಲ್ಗುಣ ಮಾಸದಲ್ಲಿ ಸಾವಿತ್ರೀ, ಚೈತ್ರಮಾಸದಲ್ಲಿ ಭೂದೇವಿ, ವೈಶಾಖಮಾಸದಲ್ಲ ಕಲ್ಯಾಣಿ,ಜ್ಯೇ ಷ್ಠಮಾಸದಲ್ಲಿ ಸತ್ಯಭಾಮಾ, ಆಷಾಢ ಮಾಸದಲ್ಲಿ ಪುಣ್ಯವತೀ, ಶ್ರಾವಣಮಾ ಸದಲ್ಲಿ ರೂಪಿಣೀ, ಭಾದ್ರಪದ ಮಾಸದಲ್ಲಿ ಇಂದುಮತೀ, ಆಶ್ವಿಯುಜಮಾಸ ದಲ್ಲಿ ಚಂದ್ರಾವತೀ, ಕಾರ್ತಿಕಮಾಸದಲ್ಲಿ ಲಕ್ಷ್ಮೀ ಈ ಹೆಸರುಗಳಂನು ಸ್ತ್ರೀ ಗಳ ನಾಮಕರಣದಲ್ಲಿ ಮಾಸನಾಮಗಳೆಂದು ಹೇಳುತ್ತಾರೆ.

ಮೂ॥ ಕುಮಾರಸ್ಯಾಭಿವೃದ್ಧ್ಯರ್ಥಂಕುರ್ಯಾದ್ಬ್ರಾಹ್ಮಣಭೋಜನಂ॥

ಟೀ॥ ಶಿಶುವಿಗೆ ಅಭಿವೃದ್ಧಿಯುಂಟಾಗುವ ಬಗ್ಗೆ ತಂದೆಯು ನಾಮಕರಣದಲ್ಲಿ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿಸಬೇಕು

ಮೂ॥ ದ್ವಿಕಾಕ್ಷರಂವಾಚತುರಕ್ಷರಂವಾವಿವರ್ಜಿತೇಊಷಾಂತ್ಯಲಕಾರರೇಫಂ।ತನ್ನಾಮಸಾವನಾದಿಕನೈಕಪಕ್ಷಸ್ಫುಟಂವದೇದ್ದಕ್ಷಿಣಕರ್ಣದೇಶೇ॥

ಟೀ॥ ಹೆಸರಿನ ಕೊನೆ ಅಕ್ಷರದ ಮುಂದೆ ಲ—ರ—ಈ ೨ ಅಕ್ಷರಗಳಿಲ್ಲದ್ದಾಗಿಯೂ ಸಮಸಂಖ್ಯೆಯವಾಗಿಯೂ, ೪ ಅಕ್ಷರವಾಗಿಯೂ ಇರುವ ಹೆಸರನ್ನು ಶಿಶುವಿನ ಬಲಕಿವಿಯಲ್ಲಿ ಸ್ಪಷ್ಟವಾಗಿ ಹೇಳಬೇಕು.

ಮೂ॥ ಅಷ್ಟಮಸ್ಥಾನಗ್ರಹಾಸ್ಸರ್ವೇನೇಷ್ಟಾಸ್ತುನಾಮಕರ್ಮಣಿ। ಧನಪುತ್ರಸುಹೃದ್ಭ್ರಾತೃನವಮೇಸಶುಭಗ್ರಹೇ।ಸಹಜಾರಿಷಷ್ಠಲಾಭಸ್ಥಾಃನಾಮಕರ್ಮಣಿಪೂಜಿತಾಃ।ದ್ವಾದಶೇಹನಿಕರ್ತವ್ಯಂಶಿಶೋರಿಷ್ಟಮಣಂಗ್ರಹಾತ್।

ಟೀ॥ ನಾಮಕರಣಲಗ್ನಕ್ಕೆ ಅಷ್ಟಮಶುದ್ಧಿ ಇರಬೇಕು. ದ್ವಿತೀಯ, ಪಂಚಮ, ಚತುರ್ಥ, ತೃತೀಯ, ನವಮ, ಈ ಸ್ಥಾನಗಳಲ್ಲಿ ಶುಭಗ್ರಹ ಯುಕ್ತನಾದ ಚಂದ್ರನು, ತೃತೀಯ ಷಷ್ಠ ಲಾಭಸ್ಥಾನಗಳಲ್ಲಿರುವ ಪಾಪಗ್ರಹಗಳು ಸಹ ಶುಭಫಲಗಳನ್ನು ಕೊಡುವವು ಶಿಶು ಹುಟ್ಟಿದ ೧೨ನೇ ದಿವಸದಲ್ಲಿ ಸೂತಿಕಾಗೃಹದಿಂದ ಮಗುವನ್ನು ಹೊರಗೆ ತರಬೇಕು

ಚೋಗೆ ತೊಡುಗುವದು.

ಮೂ॥ ಅಶ್ವಿನೀತ್ವಷ್ಟ್ರಪೌಷ್ಣೇಜ್ಯಮಿತ್ರೋತ್ತರಕರಾನಿಲೇ। ಸಿತಸೌಮ್ಯೇಜ್ಯವಾರೇಷುಚಂದ್ರತಾರಾಬಲಾನ್ವಿತೇ। ಶುಭೇಮುಹೂರ್ತೇಪೂರ್ವಾಹ್ಣೇಜಯೇಪೂರ್ಣದಿನೇತಥಾ।ಕೇಂದ್ರತ್ರಿಕೋಣಗಾಸ್ಸೌಮ್ಯಾಃಪಾಪಾಸ್ತ್ರ್ಯಾಯಾರಿರಾಶಿಗಾಃ।ಶಿಶೂನಾಂಧಾರಯೇತ್ತತ್ರಕಂಚುಕಂಚಿತ್ರವರ್ಣಕಂ॥

ಟೀ॥ ಅಶ್ವಿನೀ, ಚಿತ್ರಾ, ರೇವತೀ, ಪುಷ್ಯ, ಅನೂ, ಉತ್ತ, ಉಷಾ, ಉಭಾ, ಹಸ್ತ. ಸ್ವಾತಿ, ಈ ನಕ್ಷತ್ರಗಳಲ್ಲಿಯೂ, ಶುಕ್ರ, ಬುಧ, ಗುರು ವಾರಗಳಲ್ಲಿಯೂ, ಚಂದ್ರತಾರಾಬಲವುಳ್ಳ ಶುಭ ಮುಹೂರ್ತದಲ್ಲಿಯೂ, ಪೂರ್ವಾಹ್ಣದಲ್ಲಿಯೂ, ಜಯತಿಥಿಗಳಲ್ಲಿಯೂ ಪೂರ್ಣದಿವಸದಲ್ಲಿಯೂ, ಶುಭಗ್ರಹಗಳು ಕೇಂದ್ರತ್ರಿಕೋಣಗಳಲ್ಲಿರುವಾಗಲು, ಪಾಪಗ್ರಹಗಳು ೩-೧೧—೬ನೇ ಸ್ಥಾನಗಳಲ್ಲಿರುವಾಗಲೂ ಶಿಶುವಿಗೆ ನಾನಾ ಬಣ್ಣವುಳ್ಳ ಚೋಗೆಯನ್ನು ತೊಡಿಗಿಸತಕ್ಕದ್ದು.

ಮಗುವಿಗೆ ತೊಟ್ಲು ತೂಗಿಸುವದು.

ಮೂ॥ ತೃತೀಯೇಪಂಚಮೇಮಾಸಿತಸ್ಮಾಸವಾಶುಭೇದಿನೇ।ಧಾತ್ರ್ಯಾಮೂಲೋತ್ತರತ್ರೀಣಿತಿಷ್ಯಗೈಷುದ್ವಿದೈವಭೇ॥ ಚಂದ್ರತಾರಾಬಲಯುತೇಶಿಷ್ಟಮೇಶುದ್ಧಿಸಂಯುತೇ। ದೋಲಾರೋಹಣಯೇದ್ಬಾಲಂದ್ವಿಜಪುಣ್ಯಾಂಗನಾದಿಭಿಃ॥

ಟೀ|| ೩ನೇ ಮಾಸದಲ್ಲಿಯಾದರೂ, ೫ನೇ ಮಾಸದಲ್ಲಿ ಯಾದರೂ ಮಗು ಹುಟ್ಟಿದ ಮಾಸದಲ್ಲಿಯಾದರು, ಯಾವದಾದರು ಒಂದು ಶುಭದಿನದಲ್ಲಿ ರೋಹಿಣೀ, ಮೂಲ, ಉತ್ತರ, ಉಷಾ, ಉಭಾ, ಇವುಗಳಲ್ಲಿಯೂ, ತಿರ್ಯಙ್ಮುಖನಕ್ಷತ್ರದಲ್ಲಿಯೂ ಅಂದರೆ,—ರೇವ, ಪುನ, ಹಸ್ತ, ಚಿತ್ತ, ಸ್ವಾತಿ, ಅಶ್ವಿ, ಮೃಗ ಅನೂ, ಜ್ಯೇಷ್ಠ, ವಿಶಾ, ಈ ನಕ್ಷತ್ರಗಳಲ್ಲಿಯೂ, ಚಂದ್ರತಾರಾಬಲವುಳ್ಳನಕ್ಷತ್ರದಲ್ಲಿಯೂ, ಅಷ್ಟಮಶುದ್ಧಿ ಇರುವಾಗಲೂ, ಬ್ರಾಹ್ಮಣರು ಮುತ್ತೈದೆಯರೊಂದಿಗೆ ಮಗುವನ್ನು ತೊಟ್ಟಿಲಲ್ಲಿ ಇಡಬೇಕು.

## ಅನ್ನಪ್ರಾಶನವು.

ಮೂ|| ಷಷ್ಠೇಷ್ಟಮೇವಾದಶಮೇಚಮಾಸಿಸಂವತ್ಸರೇವಾದಿವಸೇಪ್ರವೃದ್ಧೆ |
ಪಕ್ಷೇಸಿತೇವ್ಯೋಮ್ನಿವಿಶುದ್ಧಿಭಾಜಿಬಾಲಾನ್ನಭುಕ್ತಿರ್ವಿಹಿತಾಮುನೀಂದ್ರೈಃ||

ಟೀ|| ೬-೮-೧೦ ನೇ ತಿಂಗಳಲ್ಲಿಯಾದರೂ, ವರ್ಷಾಂತದಲ್ಲಿಯಾದರು, ಹಗಲಿನಲ್ಲಿ, ಶುಕ್ಲಪಕ್ಷದಲ್ಲಿ, ಶುಕ್ರನಿಗೆ ಅಸ್ತಾದಿ ದೋಷಗಳಿಲ್ಲದಿರುವಾಗಲೂ ಬಾಲಕರಿಗೆ ಅಂನಪ್ರಾಶನ ಮಾಡತಕ್ಕದ್ದು.

ಮೂ||ದೇವತಾಪುರತಸ್ತಸ್ಯಮಾತೃತ್ಸಂಗಗತಸ್ಯಚ|ಅಲಂಕೃತಸ್ಯಭೂಷಾಭಿ ರನ್ನಪಾತ್ರೇಚವಾಂಛಿತೇ|ಮಧ್ವಾಜ್ಯಕನಕೋಪೇತೆಪ್ರಾಶಯತ್ಪಾಯಸಂಶುಭಂ

ಟೀ|| ದೇವರ ಸಮ್ಮುಖದಲ್ಲಿ ತಾಯಿ ತೊಡೆಯಮೇಲೆ ಆಭರಣಗಳಿಂದ ಅಲಂಕೃತನಾಗಿರುವ ಶಿಶುವಿಗೆ ಸುವರ್ಣಾದಿ ಪಾತ್ರದಲ್ಲಿ ಪಾಯಸವಂನಿಟ್ಟು ಅದರಲ್ಲಿ ತುಪ್ಪ ಜೇನುತುಪ್ಪ ಮಿಶ್ರಮಾಡಿ ಆ ಪಾಯಸವನ್ನು ಕುಡಿಸುವದು.

ಮೂ||ಆದಿತ್ಯತಿಷ್ಯವಸುವಿಷ್ಣುಕರಾನಿಲಾಶ್ವಿ|ಮಿತ್ರಾಖ್ಯವಿಷ್ಣುವರುಣೋತ್ತರಭಾಸುಚಿತ್ರಾ|ಬಾಲಾನ್ನಭೋಜನವಿಧೌದಶಮೇಚಶುದ್ಧೆ | ಛಿದ್ರಾನ್ವಿಹಾಯನವಮೀಂತಿಥಯಃಶುಭಾಸ್ಯುಃ||

ಟೀ|| ಪುನರ್ವಸು, ಮೃಗಶಿರ, ಧನಿಷ್ಠಾ, ಪುಷ್ಯ, ಹಸ್ತ, ಸ್ವಾತೀ, ಅಶ್ವಿನೀ, ಅನೂ, ಶ್ರವಣ, ಶತ, ಉತ್ತರ, ಉಷಾ, ಉಭಾ, ಚಿತ್ರಾ, ಈ ನಕ್ಷತ್ರಗಳಲ್ಲಿಯೂ, ದಶಮಶುದ್ಧಿ ಇರುವಾಗಲು ಹಳ್ಳಿದು ಪಕ್ಷಛಿದ್ರಗಳನ್ನು ನವಮಿಯನ್ನು ಬಿಟ್ಟು ಮಿಕ್ಕತಿಥಿಗಳಲ್ಲಿ ಬಾಲಕರಿಗೆ ಅನ್ನಪ್ರಾಶನವು ಶುಭಕರ ವಹುದು.

ಮೂ|| ವಾರಾಶ್ಚಭಾಶ್ಚ ಗುರುಚಂದ್ರಸಿತೇಂದುಜಾನಾಂ | ಮೇಷಾದಿಮೀನರಹಿತಾನಿಹಿತಾನಿಭಾನಿ| ಭುಕ್ತೌಶಿಶೋಃಶುಭಕರಾಃಪರಿಹೃತ್ಯಸೌಮ್ಯಂ ಭೌಮಂಸಿತಂನವಮನೈಧನಸಪ್ತಮೇಷು||

ಟೀ|| ಮತ್ತು ಗುರು, ಶುಕ್ರ, ಸೋಮ, ಬುಧವಾರಗಳೂ, ಮೇಷ, ವೃಶ್ಚಿಕ, ಮೀನರಾಶಿಗಳನ್ನು ಬಿಟ್ಟು ಮಿಕ್ಕರಾಶಿಗಳು, ೭-೮-೯ನೇ ರಾಶಿಗಳಲ್ಲಿ

ಬುಧ, ಅಂಗಾರಕ, ಶುಕ್ರರು ಇಲ್ಲದಿರುವಿಕೆಯೂ, ಮೇಲಿನ ಅನ್ನಪ್ರಾಶನದಲ್ಲಿ ಶುಭಕರವು.

ಅನ್ನಪ್ರಾಶನಲಗ್ನದಲ್ಲಿರುವ ಗ್ರಹಗಳಫಲವನ್ನು ಹೇಳುತ್ತಾನೆ.

ಶ್ಲೋ॥ ಕುಷ್ಠೀ ಲಗ್ನಗತೇರವೌ ತನುಕಳೇ ಚಂದ್ರೇ ಸದಾ ಭಿಕ್ಷುಕಃ। ಪೂರ್ಣೇಂ
ದಾ ಬಹುಸತ್ರದೋ ವಸಿಸುತೇ ಪಿತ್ತಾರ್ದಿತೋ ಜ್ಞಾನವಾನ್। ಜ್ಞೇ ಜೀವೇ ಬಹು
ಭೋಗವಾನ್ ಭೃಗುಸುತೇ ದೀರ್ಘಾಯುರರ್ಕಾತ್ಮಜೇ। ವಾತಾಂಗೀ ತಮಸಿ
ಧ್ವಜೇ ವ್ಯಸನಿನೀ ಬಾಲಾನ್ನಭೋಕ್ತಾ ಭವೇತ್॥

ಟೀ॥ ಅನ್ನಪ್ರಾಶನ ಲಗ್ನದಲ್ಲಿ ಸೂರ್ಯನಿದ್ದರೆ ಶಿಶುವಿಗೆ ಕುಷ್ಠರೋಗವುಂಟಾಗುತ್ತದೆ. ಕ್ಷೀಣಚಂದ್ರನಿದ್ದರೆ ಶಿಶುವು ಯಾವಾಗ್ಯೂ ಭಿಕ್ಷುಕನಾಗುತ್ತಾನೆ ಪೂರ್ಣ ಚಂದ್ರನಿದ್ದರೆ ಬಹಳ ಅನ್ನದಾನ ಮಾಡುವನು. ಅಂಗಾರಕನಿದ್ದರೆ ಬಾಲಕನು ಪಿತ್ತ ವ್ಯಾಧಿಯುಳ್ಳವನಾಗುತ್ತಾನೆ. ಬುಧನಿದ್ದರೆ ಜ್ಞಾನವಂತನಾಗುತ್ತಾನೆ. ಗುರುವಿದ್ದರೆ ಬಹು ಭೋಗಗಳುಳ್ಳವನಾಗುತ್ತಾನೆ. ಶುಕ್ರನಿದ್ದರೆ ದೀರ್ಘಾಯುಷ್ಮಂತನಾಗುತ್ತಾನೆ. ಶನಿ ಯಿದ್ದರೆ ವಾಯು ರೋಗ ಶರೀರವುಳ್ಳವನಾಗುತ್ತಾನೆ. ರಾಹು ಕೇತುಗಳಿದ್ದರೆ ಯಾವಾಗ್ಯೂತಿನ್ನುವದಕ್ಕಿಲ್ಲದೆ ಕಷ್ಟಪಡುವನು ಇದರಿಂದ ಬಾಲಕನ ಅನ್ನಪ್ರಾಶನಕ್ಕಾಗಿ ನಿಶ್ಚಯಿಸತಕ್ಕ ಶುಭ ಲಗ್ನದಲ್ಲಿ ಪೂರ್ಣಚಂದ್ರ, ಬುಧ, ಗುರು, ಶುಕ್ರ, ಈನಾಲ್ಕರಲ್ಲಿ ಒಂದು ಗ್ರಹವಿರಬೇಕೆಂದು ಭಾವವು.

## ನೂತನವಸ್ತ್ರಧಾರಣವು.

ಮೂ॥ ಹಸ್ತೋತ್ತರಾನಿಲಪುನರ್ವಸುತಿಷ್ಯಮಿತ್ರತ್ವಾಷ್ಟ್ರದ್ವಿದೈವವಿಧಿವಾ
ರುಣಪೌಷ್ಣಭೇಷು। ರಿಕ್ತಾಃ ಕ್ರಿಯಾಳಿಹರಿಚಾಪಝುಷಾರ್ಕಭೌ
ಮವಾರಾನ್ವಿಹಾಯನವವಸ್ತ್ರಮುಶಂತಿಧಾರ್ಯಂ॥

ಟೀ॥ ಹಸ್ತ, ಉತ್ತರ, ಉಷಾ, ಉಭಾ, ಸ್ವಾತೀ, ಪುನರ್ವಸು, ಪುಷ್ಯ, ಅನೂ, ಚಿತ್ತಾ, ವಿಶಾಖಾ, ರೋಹಿಣೀ, ಶತಭಿಷಕ್, ರೇವತೀ, ಈ ನಕ್ಷತ್ರಗಳಲ್ಲುತ್ತಮ. ರಿಕ್ತ ತಿಥಿಗಳನ್ನು ಮೇಷ, ವೃಶ್ಚಿಕ, ಸಿಂಹ, ಧನುಸ್ಸು, ಮೀನ ರಾಶಿಗಳನ್ನೂ, ಆದಿತ್ಯಾಂಗಾರಕ ವಾರಗಳನ್ನೂ ಬಿಟ್ಟು ಕಡಮೆ ತಿಥಿರಾಶಿಗಳಲ್ಲಿ ನೂತನ ವಸ್ತ್ರವನ್ನು ಧರಿಸತಕ್ಕದ್ದು.

## ಕೇಶ ಖಂಡನವು.

ಮೂ॥ ಅಶ್ವೀಪುಷ್ಯಪುನರ್ವಸೂಮೃಗಶಿರಸ್ವಾತ್ಯಂತವಿಷ್ಣುತ್ರಯಂ।
ಚಂದ್ರಜ್ಞಾಮರಪೂಜ್ಯಶುಕ್ರಸಹಿತಾಃ ಪೂರ್ಣಾ ಜಯಾ ಪಿತ್ರ್ಯಕಶ್ರವಾಃ॥
ಪೂರ್ವಾಹ್ಣೇ ಶುಭಲಗ್ನಹೋರದಿವಸೇಯುಗ್ಮೇ ಚ ಪಕ್ಷೇ ಶುಭೇ ಕೇಶಸ್ಯ
ದನೇ ಪರ್ವಸು ವರ್ಜ್ಯೈಸ್ತ್ಯಕ್ತ್ವಾ ಪರಾಹ್ಣಾದಿಷು॥

ಟೀ॥ ಅಶ್ವಿ, ಪುಷ್ಯ, ಪುನ,ಮೃಗಶಿರ,ಸ್ವಾತಿ, ರೇವತೀ, ಶ್ರವಣ,ಧನಿಷ್ಠಾ, ಶತಭಿಷಕ್, ಈ ನಕ್ಷತ್ರಗಳೂ ಸೋಮ, ಬುಧ,ಗುರು, ಶುಕ್ರವಾರಗಳೊಂದಿಗೆ ಶೇರಿದ ಪೂರ್ಣ ತಿಥಿಗಳೂ, ಜಯತಿಥಿಗಳೂ ಕೇಶ ಖಂಡನದಲ್ಲಿ ಶುಭಕರಗಳು. ಮತ್ತು ಪೂರ್ವಾಹ್ನದಲ್ಲೂ ಶುಭಲಗ್ನ ಶುಭಹೋರೆ ಶುಭ ದಿವಸಗಳಲ್ಲಿಯೂ ೩-೫-೭-೯-೧೧ ಇಂಥಾ ಸಮವಾಸಗಳಲ್ಲಿಯೂ ಮಗುವಿಗೆ ಕೇಳ ಖಂಡನವನ್ನು ಮಾಡತಕ್ಕದ್ದು.

## ಕರ್ಣ ವೇಧನವು

ಮೂ॥ಮಾಸೇಷಷ್ಠೆಸಪ್ತಮೇವಾಷ್ಟಮವಾವಧ್ಯೈಕಣ್ಣಾದ್ವಾದಶೇಷೋಡಶೇಹ್ನಿ । ಮಧ್ಯೈವಾಹ್ನಃಪೂರ್ವಭಾಗೇನರಾತ್ರೌನಕ್ಷತ್ರೆದ್ವೇದ್ವೆ ತಿಥಿರ್ವರ್ಜಯಿತ್ವಾ॥

ಟೀ ॥ ೬-೭-೮ ನೇ ಮಾಸಗಳಲ್ಲಿ ಮಗುಹುಟ್ಟಿದ ೧೨-೧೬ನೇ ದಿವಸಗಳಲ್ಲಿಯಾದರೂ, ಮಧ್ಯಾಹ್ನ ಕಾಲದಲ್ಲಿಯಾದರೂ, ಅದರ ಪೂರ್ವ ಭಾಗದಲ್ಲಿಯಾದರೂ ವಳ್ಳೇದು ೨ ನಕ್ಷತ್ರಗಳು ೨ ತಿಥಿಗಳು ಶೇರಿದ ದಿನಗಳನ್ನು ಬಿಟ್ಟು ಪೂರ್ಣತಿಥಿ ನಕ್ಷತ್ರಗಳಲ್ಲಿ ಶಿಶುವಿಗೆ ಕಿವಿ ಚುಚ್ಚತಕ್ಕದ್ದು. ರಾತ್ರಿ ಕಾಲದಲ್ಲಿ ಕರ್ಣವೇಧನವು ಕೂಡದೆಂದು ಭಾವವು.

ಮೂ॥ಹರಿಹರಕರಚಿತ್ರಾಸೌಮ್ಯಸೌಷ್ಣೋತ್ತರಾರ್ದ್ರಾ। ದಿತಿವಸುಷುಘಟಾಳೀಸಿಂಹಲಗ್ನೈರ್ವಿವರ್ಜೆ।ಶಶಬುಧಗುರುಶಾವ್ಯೈವಾಸರೇಸದ್ವಿರಿಕ್ತಾ।ರಹಿತತಿಥಿಷುಶುದ್ಧೆನೈಧನೇಕರ್ಣವೇಧಃ॥

ಟೀ॥ ಶ್ರವಣ, ಆರ್ದ್ರಾ, ಹಸ್ತ, ಚಿತ್ರಾ, ಮೃಗ, ರೇವತೀ, ಉತ್ತರ, ಉಷಾ, ಉ:ಬಾ,ಪುಷ್ಯ, ಪುನ, ಧನಿಷ್ಠಾ, ಈ ನಕ್ಷತ್ರಗಳಲ್ಲಿ ಉತ್ತಮ. ಕುಂಭ, ವೃಶ್ಚಿಕ, ಸಿಂಹಲಗ್ನಗಳನ್ನು ಪಂಚಪರ್ವಗಳನ್ನು ರಿಕ್ತತಿಥಿಗಳನ್ನು ಬಿಟ್ಟು ಇತರ ಲಗ್ನ ತಿಥಿಗಳಲ್ಲಿಯೂ, ಸೋಮ, ಬುಧ, ಗುರು, ಶುಕ್ರವಾರಗಳಲ್ಲಿಯೂ ಅಷ್ಟಮ ಶುದ್ಧಿ ಇರುವಾಗಲು ಕರ್ಣವೇಧನವು ಮಾಡತಕ್ಕದ್ದು.

ಮೂ॥ಕರ್ಣವೇಧನಲಗ್ನಸ್ಯನೇಷ್ಟಾಸರ್ವೇಷ್ಟಮಸ್ಥಿತಾಃ। ಉಕ್ತೈನೈವ ವಿಧಾನೇನಕುರ್ಯಾತ್ಕರ್ಣಸ್ಯವೇಧನಂ। ಅನುಕ್ತಮಪಿಕುರ್ಯಾಚ್ಚೇತ್ಕರ್ಣಚ್ಛೇದೋಭವಿಷ್ಯತಿ॥

ಟೀ॥ ಕರ್ಣವೇಧನಲಗ್ನಕ್ಕೆ ಅಷ್ಟಮಸ್ಥಾನದಲ್ಲಿ ಯಾವಗ್ರಹವುಇರಕೂಡದು ಹಿಂದೆ ಹೇಳಲ್ಪಟ್ಟ ಕ್ರಮದಂತೆ ಕರ್ಣವೇಧನ ಮಾಡದೆ ಮನಸ್ಸಿಗೆ ಬಂದಂತೆ ಮಾಡಿದರೆ ಚುಚ್ಚಿದ ಕಿವಿಯು ಕಿತ್ತು ಹೋಗುವದು.

## ಚೌಲವಿಧಿಯು.

ಮೂ॥ತೃತೀಯೇಂಶವರ್ಷೇಸ್ಯಧನಂಚಮೇಬ್ದೆಗತತ್ರಿಭಾಗೇಸ್ಪ್ರವದಂತಿಚೌ

ಲಂ||ಉದಗ್ಗತೇರ್ಕೆಗುರುಶುಕ್ರತೇಜಃ| ಪ್ರಕಾಶಿತಂವ್ಯೋಮ್ನಿಚಶುಕ್ಲಪಕ್ಷೇ||

ಟೀ|| ಮಗ ಹುಟ್ಟಿದ ೩ ವರ್ಷದಲ್ಲಾದರೂ ಅಥವಾ ೫ನೇ ವರ್ಷದಲ್ಲಾದರೂ ಆ ವರ್ಷದಲ್ಲಿ ಮೂರು ಪಾಲು ಕಳೆದು ಹೋದ ಮೇಲೆ ಉತ್ತರಾಯಣದಲ್ಲಿ ಗುರು, ಶುಕ್ರರು, ಆಕಾಶದಲ್ಲಿ ಪ್ರಕಾಶಿಸುತ್ತಿರುವಾಗ ಶುಕ್ಲ ಪಕ್ಷದಲ್ಲಿ ಚೌಲವಮಾಡತಕ್ಕದ್ದು

ಮೂ||ಆದಿತ್ಯಸೌಮ್ಯವಸುವೈಷ್ಣವಪೌಷ್ಯಶಿಷ್ಯ ತ್ವಾಷ್ಟ್ರಾಶ್ವಿ ಚಂಡಕಿ
ರಣೇಷುದಿವಾಪ್ರಶಸ್ತಂ|ಸ್ವಾತೀವಿಧಾತೃವರುಣೋತ್ತರಭಾನಮಧ್ಯಾ|
ನ್ಯಹುನಿಶಾಸ್ವಪಿನಚಕ್ಷೌರಕರ್ಮಕಾರ್ಯಂ||

ಟೀ||ಪುನರ್ವಸೂ, ಮೃಗಶಿರಾ, ಧನಿಷ್ಠಾ, ಶ್ರವಣ, ರೇವತೀ, ಪುಷ್ಯ, ಚಿತ್ರಾ, ಅಶ್ವಿನಿ, ಹಸ್ತ ಈ ನಕ್ಷತ್ರಗಳಲ್ಲಿ ಉತ್ತಮವು, ಸ್ವಾತೀ, ರೋಹಿಣಿ, ಶತಭಿಷಕ್, ವುತ್ತರ, ವುತ್ತರಾಭಾದ್ರ, ವುತ್ತರಾಷಾಢಾ, ಈ ನಕ್ಷತ್ರಗಳು ಮಧ್ಯಮಗಳು ಏವಂಚ ಚೌಲ ಮಧ್ಯಾಹ್ನ ಕಾಲದಲ್ಲೇ ಮಾಡತಕ್ಕದ್ದೇ ಹೊರ್ತು ರಾತ್ರಿ ಕಾಲದಲ್ಲಿ ಮಾಡಕೂಡದು:-

ಮೂ|| ಷಷ್ಠ್ಯಷ್ಟಮೀಪ್ರತಿಪದಸ್ತಿಥಯಶ್ಚರಿಕ್ತಾ ವರ್ಜ್ಯಾಃಶಶಾಂಕಗು
ರುಸೋಮಜಭಾರ್ಗವಾಣಾಂ| ವಾರಾಂಶಕೋದಯವಿಲೋಕನಮಿಷ್ಟ
ಮಾಹುಃಕ್ಷೌರೇತುಕರ್ಮಣಿಶುಭಂನದಿಶಂತಿಚಾನ್ಯ||

ಟೀ|| ಕ್ಷೌರಕರ್ಮದಲ್ಲಿ ಷಷ್ಟಿ, ಅಷ್ಟಮೀ, ಪ್ರತಿಪತ್, ರಿಕ್ತ ತಿಥಿಗಳು, ಇವುಗಳನ್ನು ಬಿಡತಕ್ಕದ್ದು. ಮತ್ತು ಚಂದ್ರ, ಗುರು, ಬುಧ, ಶುಕ್ರ, ಇವರುಗಳ ವಾರಗಳು, ಅಂಶಗಳು, ಲಗ್ನಗಳು, ವೀಕ್ಷಣಗಳು, ಇವುಗಳು ಶುಭಪ್ರದಗಳು, ಇತರಗ್ರಹಗಳ ವಾರ, ಅಂಶ, ಲಗ್ನ ವೀಕ್ಷಣಗಳು, ಅಶುಭಗಳು.

ಮೂ|| ಕರ್ಕ್ಯಂಗನಾಮಿಥುನಮೀನತುಲೋಕ್ಷನಕ್ರಾಃ ಪೂಜ್ಯಾಃಕ್ರಿಯಾ
ಳಿಹರಿಚಾಪಘಟಾಜಘನ್ಯಾಃ | ತೇಪಿಸ್ವವೀರ್ಯಶುಭವೇಟಯುತಾವಿಧೇ
ಯಾಚೌಲೇಘಟೇಶುಭಯುತೋಪಿನಿಷಿದ್ಧವ||

ಟೀ|| ಕ್ಷೌರಕರ್ಮದಲ್ಲಿ ಕಟಕ, ಕನ್ಯಾ, ಮಿಥುನ, ಮೀನ, ತುಲಾ, ವೃಷಭ, ಮಕರ, ಈ ರಾಸಿಗಳು, ಉತ್ತಮಗಳು, ಮೇಷ, ವೃಶ್ಚಿಕ, ಸಿಂಹ, ಧನುಸ್ಸು, ಕುಂಭರಾಶಿಗಳು ಅಧಮಗಳು, ಅಂಥಾ ಅಧಮರಾಶಿಗಳು ತಮ್ಮ ಬಲದೊಂದಿಗೂ, ಶುಭಗ್ರಹಗಳೊಂದಿಗೂ ಕೂಡಿಕೊಂಡು ಇದ್ದರೆ ಅರಾಶಿಗಳಲ್ಲೂ, ಮಾಡಬಹುದು ಆದರೆ ಕುಂಭರಾಶಿ ಮಾತ್ರ ಎಷ್ಟು ಬಲವಿದ್ದರೂ ಬಿಡತಕ್ಕದ್ದಾಗಿ ಇದೆ.

ಮೂ|| ತ್ರಿಕೋಣಕೇಂದ್ರಾಯಗತೇಷುಸೌಮ್ಯೇಷ್ವಾಯಾರಿಮೃತ್ಯುತ್ಥಭವಮಾ
ಶ್ರಿತೇಷು|ಪಾಪೇಷುಶುದ್ಧೇಷ್ಟಮಕೇಶಿಶೂನಾಂಚೌಲಂಪ್ರಶಸ್ತಂಮು

ಸಿಂಹಿಕಪ್ರದಿಷ್ಟಂ॥

ಟೀ॥ ಶುಭಗ್ರಹಗಳು ಲಗ್ನ ೭-೫-೭-೯-೧೦-೧೧-ಈ ಸ್ಥಾನಗಳಲ್ಲಿ ಇರುವಾಗಲೂ, ೩-೬-೧೧ ಈ ಸ್ಥಾನಗಳಲ್ಲಿ ಪಾಪ ಗ್ರಹಗಳಿರುವಾಗಲೂ ಅಷ್ಟಮ ಶುದ್ಧಿ ಇರುವಾಗಲೂ ಮಗುವಿಗೆ ಚೌಲಕರ್ಮವನ್ನು ಮಾಡುವದುತ್ತಮ.

ಮೂ॥ ಸೂನೋರ್ಮಾತರಿಗರ್ಭಿಣ್ಯಾ ಚೂಡಾಕರ್ಮ ನಕಾರಯೇತ್॥
ಯದಿಕುರ್ಯಾದ್ವಿಪತ್ತಿಸ್ಸ್ಯಾದ್ದಂಪತ್ಯೋಶ್ಶಿಶೋರ್ವಾ ॥

ಟೀ॥ ಮಗುವಿನ ತಾಯಿ ಗರ್ಭವತಿಯಾಗಿರುವಾದ ಮಗುವಿಗೆ ಚೌಲಕರ್ಮವನ್ನು ಮಾಡಕೂಡದು, ಹಾಗೆ ಮಾಡಿದರೆ ತಾಯಿ ತಂದೆಗಳಿಗಾದರು ಅಥವಾ ಮಗುವಿಗಾದರೂ ಅನಿಷ್ಟ ಸಂಭವಿಸುವದು.

ಅಕ್ಷರಾಭ್ಯಾಸ.

ಮೂ॥ ಉದಗರ್ಕೆಪಂಚಮೇಬ್ದೇ ಪಂಚಮೇಮಾಸಿಪಂಚಮೇ।
ದಿವಸೇಪಿಚಬಾಲಾನಾಮಕ್ಷರಗ್ರಹಣಂಸ್ಮೃತಂ॥

ಟೀ॥ ಬಾಲಕರಿಗೆ ೫ನೇ ವರ್ಷ, ೫ನೇ ಮಾಸ, ೫ ನೇ ದಿವಸದಲ್ಲಿ ವಿದ್ಯಾಭ್ಯಾಸ ಮಾಡಿಸತಕ್ಕದ್ದು, ಆ ಕಾಲ ಉತ್ತರಾಯಣವಾಗಿದ್ದರೆ ಉತ್ತಮ.

ಮೂ॥ ಉದಗ್ಗತೇಭಾಸ್ವತಿಪಂಚಮೇಬ್ದೇಪ್ರಾಪ್ತೇಕ್ಷರಸ್ವೀಕರಣಂಶಿಶೂನಾಂ।
ಸರಸ್ವತೀಂವಿಘ್ನವಿನಾಯಕಂಚಗುರೂದನಾದ್ಯೈರಭಿಪೂಜ್ಯಕುರ್ಯಾತ್॥

ಟೀ॥ ಸೂರ್ಯನು ಉತ್ತರಾಯಣದಲ್ಲಿರುವಾಗ ಮಗುವಿಗೆ ೫ನೇವರುಷದಲ್ಲಿ ಸರಸ್ವತೀ ವಿಘ್ನೇಶ್ವರರಿಗೆ ಮಧುರವಾದ ಭಕ್ಷ್ಯ ಭೋಜ್ಯಾದಿಗಳಿಂದ ಪೂಜೆಯಂಮಾಡಿ ವಿದ್ಯಾಭ್ಯಾಸವು ಮಾಡಿಸತಕ್ಕದ್ದು.

ಶ್ಲೋ॥ ಹಸ್ತಾದಿತ್ಯಸಮೀರಮಿತ್ರಪುರಜಿತ್ತ್ವಾಷ್ಟ್ರಾಶ್ವಿಚಿತ್ರಾಚ್ಯುತೇ ।ಸ್ವಾ
ರಾರ್ಕ್ಯರ್ಕಜವಾಸರಾದಿರಹಿತೇರಾಶೌಚರೇಚೋಭಯೇ । ಪಕ್ಷೇಪೂರ್ಣ
ನಿಶಾಕರೇ ಪ್ರತಿಪದಂರಿಕ್ತಾಂವಿಹಾಯಾಷ್ಟಮೀಂ। ಷಷ್ಠೀಮಷ್ಟಮಶು
ದ್ಧಿಭಾಜಿಭವನೇಪ್ರೋಕ್ತಾಕ್ಷರಸ್ವೀಕೃತಿಃ॥

ಟೀ॥ ಹಸ್ತ, ಪುನ, ಸ್ವಾತೀ, ಅನೂ, ಆರ್ದ್ರಾ, ರೇವತೀ, ಅಶ್ವಿನಿ, ಚಿತ್ರಾ, ಶ್ರವಣ, ಈ ನಕ್ಷತ್ರಗಳಲ್ಲಿ ಉತ್ತಮ, ಆದಿತ್ಯ, ಅಂಗಾರಕ, ಶನಿವಾರಗಳನ್ನು, ಬಿಟ್ಟು ಮಿಕ್ಕ ವಾರಗಳಲ್ಲಿಯೂ ಚರ ದ್ವಿಸ್ವಭಾವ ರಾಶಿಗಳಲ್ಲಿಯೂ, ಶುಕ್ಲ ಕೃಷ್ಣ ಪಕ್ಷಗಳಲ್ಲಿ ಚಂದ್ರನು ಪೂರ್ಣನಾಗಿರುವಾಗಲೂ ಉತ್ತಮ ಪಾಡ್ಯಮಿಗಳನ್ನೂ ರಿಕ್ತತಿಥಿಗಳನ್ನು ಅಷ್ಟಮಿಗಳನ್ನು, ಷಷ್ಠಿಗಳನ್ನು, ಬಿಟ್ಟು ಅಷ್ಟಮ ಶುದ್ಧಿ ಇರುವ ಶುಭ ಲಗ್ನದಲ್ಲಿ ಅಕ್ಷರ ಸ್ವೀಕಾರಮಾಡಿಸತಕ್ಕದ್ದು.

ಉಪನಯನ ಪ್ರಕರಣವು

ಮೂ॥ ಉಕ್ತಾತ್ರಗರ್ಭಾಷ್ಟಮವಾರ್ಷ್ಯಕ್ತವರ್ಷೇವಿಪ್ರಾದೀನಾಮುಚ್ಯತೇ

ಮೌಂಜಿಬಂಧಃ ||ಅರ್ಥಾಯಸ್ತ್ರೀಧರ್ಮ್ಮಉಕ್ತಾಖ್ಯಸಂಸ್ಥೆ ಚೇದ್ವಾಗೀಶೆ ಸ್ವೋಚ್ಚಕೋರಸ್ಥೆ ಮೌಂಜಿಬಂಧಃ||

ಟೀ||ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಸೂತ್ರಕಾರರಿಂದ ಹೇಳಲ್ಪಟ್ಟಿರುವ ವಸಂತ ಗ್ರೀಷ್ಮ ಶರದೃತುಗಳಲ್ಲಿಯೂ, ಹುಟ್ಟಿದ್ದು ಮೊದಲು ಬ್ರಾಹ್ಮರಿಗೆ ೮ನೇ ವರ್ಷ, ಕ್ಷತ್ರಿಯರಿಗೆ ೧೧ನೇ ವರ್ಷ ವೈಶ್ಯರಿಗೆ ೧೨ನೇವರ್ಷಗಳಲ್ಲಿಯೂ ೨-೧೧-೭-೯-೫ ಈ ರಾಶಿಗಳಲ್ಲಿ ಬೃಹಸ್ಪತಿ ಇರುವಾಗ ಬ್ರಾಹ್ಮಣಾದಿ ಮೂರು ವರ್ಣದವರಿಗೆ ಉಪನಯನವಂ ಮಾಡತಕ್ಕದ್ದು.

ಮೂ||ಋಗ್ವೇದಾಧಿಪತಿರ್ಜೀವೋಯಜುರ್ವೇದಾಧಿಪಸ್ಸಿತಃ |ಸಾಮವೇದಾಧಿಪೋಭೌಮಶ್ಶಶಿಜೋಥರ್ವನಾಯಕಃ||

ಟೀ|| ಋಗ್ವೇದಕ್ಕೆ ಬೃಹಸ್ಪತಿಯು, ಎಜುರ್ವೇದಕ್ಕೆ ಶುಕ್ರನು, ಸಾಮವೇದಕ್ಕೆ ಅಂಗಾರಕನು, ಅಥರ್ವಣ ವೇದಕ್ಕೆ ಬುಧನು ಅಧಿಪತಿಗಳೆಂದು ತಿಳಿಯತಕ್ಕದ್ದು.

ಮೂ|| ಚಂದ್ರಾದಿತ್ಯೋತ್ತರಾಶ್ವಿಶ್ರವಣವಸುಮರುತ್ವಾಷ್ಟ್ರಪೌಷ್ಣಾರ್ಕಮಿತ್ರ | ಪ್ರಾಜೇಶಾರ್ಕೈಷುಸೌಮ್ಯಾಮರಗುರುಶಶಭೃಗ್ವಾರರಾಶ್ಯಂಶಕೇಷು | ತ್ಯಕ್ತ್ವಾನಧ್ಯಾಯರಿಕ್ತಾಪಿತೃತಿಥಿಮಮರಾರಾರ್ಕ್ಯಮುಕ್ತಾನ್ಯರಾಶೌ |ಗೋಜೋಪಾಂತ್ಯಾಂಗನಾಕರ್ಕಿತುಲಮಿಥುನಭೇಷ್ವಷ್ಟಮೇಧಾಮ್ನಿ ಶುದ್ಧೆ||

ಟೀ||ಮೃ, ಪುನ, ಉತ್ತರ, ಉಷಾ, ಉಭಾ, ಅಶ್ವಿನೀ, ಶ್ರವಣ, ಧನಿಷ್ಠಾ, ಸ್ವಾತಿ, ಚಿತ್ರಾ, ರೇವ, ಹಸ್ತ, ಅನೂ, ರೋ, ಪುಷ್ಯ, ಈ ನಕ್ಷತ್ರಗಳಲ್ಲಿಯೂ ಬುಧನು, ಗುರು, ಸೋಮ, ಶುಕ್ರ, ಅಂಗಾರಕ, ಇವರುಗಳ ರಾಶಿಗಳಲ್ಲಿಯೂ ಅಂಶಗಳಲ್ಲಿಯೂ ಉತ್ತಮ, ಅನಧ್ಯಾಯ ದಿನಗಳನ್ನು ರಿಕ್ತತಿಥಿಗಳನ್ನು, ಶ್ರಾದ್ಧ ದಿನಗಳನ್ನು, ಶನಿ, ಅಂಗಾರಕ, ಸೂರ್ಯ, ಇವರುಗಳರುವರಾಶಿಗಳನ್ನೂ ಬಿಟ್ಟು ವೃಷಭ, ಮೇಷ,ಕುಂಭ,ಕನ್ಯಾ, ಕಟಕ, ತುಲಾ, ಮಿಥುನ ರಾಶಿಗಳಲ್ಲಿಯೂ, ಉಪನಯನ ಲಗ್ನಕ್ಕೆ ಅಷ್ಟಮಶುದ್ಧಿ ಯಿರುವಾಗಲೂ ಉಪನಯನವನ್ನು ಮಾಡಿಸತಕ್ಕದ್ದು.

ಮೂ|| ಮೈತ್ರಹಸ್ತತ್ರಯೇವಿಷ್ಣುತ್ರಯೇಪೌಷ್ಣೋತ್ತರಾತ್ರಯೇ |ಧಾತೃದ್ವಯೇತಿಥಿಜ್ಯೇಷ್ಠದಸ್ರಭೇಹ್ಯುತ್ತಮಂವ್ರತಂ||

ಟೀ||ಅನೂರಾಧಾ, ಜ್ಯೇಷ್ಠಾ, ಮೂಲ, ಹಸ್ತ, ಚಿತ್ರಾ, ಸ್ವಾತೀ, ಶ್ರವಣ, ಧನಿಷ್ಠಾ ಶತಭಿಷಕ್, ರೇವತೀ, ಉತ್ತ, ಉಷಾ, ಉಭಾ, ರೋಹಿಣೀ, ಮೃಗಶೀರ್ಷ, ಪುನ, ಪುಷ್ಯ, ಅಶ್ವಿನೀ ಈ ನಕ್ಷತ್ರಗಳಲ್ಲಿ ಉಪನಯನ ವ್ರತಮಾಡುವದುತ್ತಮ.

ಮೂ||ಚಂದ್ರೋಮಾತಾಪಿತಾಸೂರ್ಯಃಪ್ರಾಣಾಶ್ಚೈವಬೃಹಸ್ಪತಿಃ|ತ

ಸ್ಮಾದ್ಬಲತ್ರಯಮಸ್ಯಾವ್ಯಂಲಕ್ಷ್ಯೇವಾಗೋಚರಂಸಿವಾ॥

ಟೀ॥ಚಂದ್ರನು ತಾರೆ, ಸೂರ್‍ಯನುತಂದೆಯು, ಬೃಹಸ್ಪತಿಯು ಪ್ರಾಣವು ಆದ್ದರಿಂದ ಈ ಮೂರು ಗ್ರಹಗಳು ಜಾತಕದಲ್ಲಿಯಾದರು ಗೋಚಾರದಲ್ಲಿ ಯಾದರೂ ಬಲಿಷ್ಠರಾಗಿರತಕ್ಕದ್ದು.

ಮೂ॥ಶಾಖೇಶರವಿವರ್ಣೇಶಗುರೂಣಾಮ್ಬಲಮ್ಪೂರ್ಣಕಂ।ತಥಾಪ್ಯೈಷಾಂ ಗುರುಬಲಂಮುಖ್ಯಮಾಚಾರ್‍ಯಶಿಷ್ಯಯೋಃ॥

ಟೀ॥ ಶಾಖಾಧಿಪತಿಯು, ಸೂರ್‍ಯನು, ವರ್ಣಾಧಿಪತಿಯು, ಗುರುವು ಇವರು ಗಳು ಬಲಿಷ್ಠರಾಗಿರಬೇಕು. ಆದರೂ ಆಚಾರ್‍ಯಶಿಷ್ಯರಿಬ್ಬರಿಗೂ ಮುಖ್ಯವಾಗಿ ಗುರುಬಲವಿರತಕ್ಕದ್ದು.

ಶ್ಲೋ॥ಉಕ್ತೇಪಿವರ್ಷೇನಬಲೀಗುರುಶ್ಚೇಚ್ಛಾನ್ತ್ಯಾಪ್ರಶಸ್ತಂವ್ರತಬಂಧಕರ್ಮ। ಅನುಕ್ತವರ್ಷೇಸಬಲಪ್ರದೋಪಿನೈವೈತಯೋರಬ್ದಬಲಂಬಲೀಯಃ॥

ಟೀ॥ ಬ್ರಾಹ್ಮಣಾದಿ ಮೂರು ವರ್ಣಗಳಿಗೆ ಹೇಳಲ್ಪಟ್ಟ ವರ್ಷಗಳಲ್ಲಿ ಒಂದುವೇಳೆ ಗುರುಬಲವಿಲ್ಲದಿದ್ದರು ಶಾಂತಿ ಮೊದಲಾದ ಕರ್ಮಗಳಿಂದ ಉಪನಯವನ್ನು ಮಾಡಬಹುದು. ಹೇಳಲ್ಪಡದ ವರ್ಷಗಳಲ್ಲಿ ಬಲಿಷ್ಠನಾಗಿದ್ದರೂ ಉಪನಯನವನ್ನು ಮಾಡಕೂಡದು. ಯಾತಕ್ಕೆಂದರೆ ಗುರುಬಲ,ವರ್ಷಬಲ, ಇವುಗಳೊಳಗೆ ವರ್ಷಬಲವೇ ಶ್ರೇಷ್ಠವು.

ಮೂ॥ ಜನ್ಮಾಂತನಿಧನಸ್ಥೋಪಿಪೂಜಯಾಶುಭದೋಗುರುಃ। ಉಕ್ತಾಬ್ದೇಚೇತನುಕ್ತೇತುನಶುಭೋಬಲವಾನಪಿ॥

ಟೀ॥ಗುರುವು ಹೇಳಲ್ಪಟ್ಟ ವರ್ಷಗಳಲ್ಲಿ ಜನ್ಮ, ದ್ವಾದಶ, ಅಷ್ಟಮಸ್ಥಾನಗಳಲ್ಲಿದ್ದರೂ ಗುರುಪ್ರೀತಿಕರವಾದ ಪೂಜಾದಿ ಶಾಂತಿಗಳಿಂದ ಶುಭಪ್ರದನಾಗುತ್ತಾನೆ. ಹೇಳಲ್ಪಡದ ವರ್ಷಗಳಲ್ಲಾದರೂ ಬಲಿಷ್ಠನಾಗಿ ಇದ್ದರೂ ಶುಭಪ್ರದನಲ್ಲ,

ಮೂ॥ಕೋದಂಡಕರ್ಕಿಮೀನಸ್ಥೋಪಿಶುಭದೋಗುರುಃ। ತದ್ರಾಶಿಭಾಗಸಂಸ್ಥೋಪಿಶುಭದಃಪ್ರೋಚ್ಯತೇಸ್ವಯಂ॥

ಟೀ॥ಗುರುವು ಕಟಕ, ಧನುಸ್ಸು, ಮೀನ ರಾಸಿಗಳಲ್ಲಿಯೂ ಅವುಗಳ ಅಂಶಗಳಲ್ಲಿಯೂ ಇದ್ದರೆ ಆ ರಾಸಿಗಳು ಹೇಳಲ್ಪಟ್ಟ ಜನ್ಮ, ಅಷ್ಟಮ, ದ್ವಾದಶ ರಾಶಿಗಳಾಗಿದ್ದರೂ ಶುಭಪ್ರದನಾಗುವನು.

ಮೂ॥ ಸ್ವೋಚ್ಚೇಸ್ವಮಿತ್ರೇಸ್ವಗೃಹೇತ್ರಿಕೋಣೇಜೀವೋಗತೋಯದ್ಯುಪನೀತಕಾಲೇ । ಶಿಶೋಶ್ಚತುರ್ಥೇನಿಧನೇತೃತೀಯೇಕರ್ಮಾಂತ್ಯಸಂಸ್ಥೋಪಿಶುಭಪ್ರದಸ್ಸ್ಯಾತ್॥

ಟೀ ॥ಉಪನಯನಕಾಲದಲ್ಲಿಗುರುವು ಉಚ್ಚ,ಸ್ವಕ್ಷೇತ್ರ, ಮೂಲತ್ರಿಕೋ

ಳು, ಮಿತ್ರಕ್ಷೇತ್ರಗಳಲ್ಲಿದ್ದರೆ ಆ ರಾಶಿಗಳು ಜನ್ಮ, ಅಷ್ಟಮ, ದ್ವಾದಶ, ತೃತೀಯ, ಚತುರ್ಥ, ದಶಮ, ಈ ಸ್ಥಾನಗಳಾಗಿದ್ದರೂ ಶುಭಪ್ರದನಾಗುತ್ತಾನೆ.

ಮೂ॥ ದ್ವಿತೀಯಾಚತೃತೀಯಾಚಪಂಚಮೀಸಪ್ತಮೀತಥಾ। ತ್ರಯೋದಶೀಚದಶಮೀಪ್ರಶಸ್ತಾಸ್ತಿಥಯೋವ್ರತೇ॥

ಟೀ॥ ಉಪನಯನದಲ್ಲಿ ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ತ್ರಯೋದಶೀ, ದಶಮೀ, ಈ ತಿಥಿಗಳು ಶ್ರೇಷ್ಠಗಳು.

ಮೂ॥ ಪೂರ್ವಪಕ್ಷಶ್ಶುಭಃಪ್ರೋಕ್ತಃಕೃಷ್ಣಶ್ಚಾಂತ್ಯತ್ರಿಕಂವಿನಾ। ಕೃಷ್ಣಪಕ್ಷೇಸಿತತ್ರ್ಯಂಶತ್ರಯೋದಶ್ಯಪಿಕೇಚನ।

ಟೀ॥ ಉಪನಯನದಲ್ಲಿ ಶುಕ್ಲಪಕ್ಷವು ಶುಭಕರವು, ಏಕಾದಶೀ, ದ್ವಾದಶೀ, ತ್ರಯೋದಶೀ, ಚತುರ್ದಶಿ, ಅಮಾವಾಸ್ಯೆ ಈ ೫ ತಿಥಿಗಳನ್ನು ಬಿಟ್ಟು ಕಡಮೆ ಕೃಷ್ಣಪಕ್ಷದ ತಿಥಿಗಳು ಶುಭಕರಗಳು. ಇಲ್ಲಿ ಕೆಲವರು ತ್ರಯೋದಶಿಯಲ್ಲಿಯೂ ಮಾಡಬಹುದೆಂದು ಹೇಳುವರು.

ಮೂ॥ ಅಪಂಚಮ್ಯಾಸ್ತುತಿಥಯಃಪರಾಸ್ತ್ಯುರತಿನಿಂದಿತಾಃ। ನಿತ್ಯಾನಧ್ಯಾಯದಿವಸಾನ್ವರ್ಜಯೇದೌಪನಾಯನೇ॥

ಟೀ॥ ಕೃಷ್ಣಪಕ್ಷ ಪಂಚಮಿಯ ತರುವಾಯ ೧೦ ತಿಥಿಗಳು ತ್ಯಾಜ್ಯಗಳು, ಆದ್ದರಿಂದ ಆ ತಿಥಿಗಳನ್ನೂ, ಅನಧ್ಯಾಯಗಳನ್ನೂ ಬಿಟ್ಟು ಇತರ ತಿಥಿಗಳಲ್ಲಿ ಉಪನಯನ ಕರ್ಮವನ್ನು ಮಾಡತಕ್ಕದ್ದೆಂದು ಭಾವವು

ಅನಧ್ಯಾಯದಿನಗಳು.

ಮೂ॥ ನೈಮಿತ್ತಿಕಾಸ್ತ್ವನಧ್ಯಾಯಾಧೃತಿಪಾತಾರ್ಧಮಾರಿತಾಃ। ಅಷ್ಟಮ್ಯಾಂಚಚತುರ್ದಶ್ಯಾಂಪೂರ್ಣಿಮಾಯಾಂಕುಹೂತಿಥೌ। ಸಂಧ್ಯಯೋರ್ಗರ್ಜಿತೇನೈವಸ್ವಾಧ್ಯಾಯಃಪ್ರತಿಪತ್ಸ್ವಪಿ। ಪೂರ್ವರಾತ್ರ್ಯಾಂಯಥಾಮೇಘೋಯತ್ರಗರ್ಜತಿವಾಸರೇ। ನವೇದಾಧ್ಯಯನಂಕಾರ್ಯಂಸರ್ವಥೈವಮುಪಾನಿಶಿ॥

ಟೀ॥ ವೈಧೃತಿ, ವ್ಯತೀಪಾತ, ಮಹಾಪಾತ, ಈ ದಿವಸಗಳ ಅರ್ಧ ದಿನಗಳು ಬಂದರೂ, ಅಷ್ಟಮೀ, ಚತುರ್ದಶೀ, ಪೂರ್ಣಿಮಾ, ಅಮಾವಾಸ್ಯೆ, ಪ್ರಾತಃಕಾಲ ಸಾಯಂಕಾಲಗಳಲ್ಲಿ ಮೇಘಗರ್ಜನೆ ವುಂಟಾದ ದಿನಗಳೂ, ಪ್ರತಿಪತ್ತುಗಳು ಪೂರ್ವರಾತ್ರಿಯಲ್ಲಿ ಯಾವ ದಿವಸ ಮೇಘಗರ್ಜನೆಯಾಗುತ್ತದೋ ಆ ದಿನವೂ, ಅರ್ಧರಾತ್ರಿಯೂ, ಇವುಗಳಲ್ಲಿ ವೇದಾಧ್ಯಯನ ಮಾಡಕೂಡದು

ಮೂ॥ ತ್ರಯೋದಶೀಸಪ್ತಮೀಚಚತುರ್ಥೀಕಲಯಾದಿ। ರಾತ್ರ್ಯಾಸ್ತ್ರಿಶಿಮನೀಸ್ಯಾತ್ಪ್ರದೋಷತತ್ರನಾನಃ।

ಟೀ॥ ತ್ರಯೋದಶೀ, ಸಪ್ತಮೀ, ಚತುರ್ಥೀ, ಈ ಮೂರು ತಿಥಿಗಳೂ ರಾತ್ರಿಯಲ್ಲಿ ೧ ಘಳಿಗೆಮಾತ್ರ ಸಂಬಂಧಿಸಿದ್ದರೆ ಅದಿನ ಸಾಯಂಕಾಲ ಪ್ರದೋಷ

ವು, ಆ ಕಾಲದಲ್ಲಿ ವೇದಾಧ್ಯಯನ ಮಾಡಕೂಡದು.

ಮೂ॥ ವಿನರ್ತುನಾವಸಂತೇನಕೃಷ್ಣಪಕ್ಷೇಗಳಗ್ರಹೇ। ಉಪನೀತಸ್ಯನ
ಧ್ಯಾಯೆಪುನಸ್ಸಂಸ್ಕಾರಮರ್ಹತಿ॥

ಟೀ॥ ವಸಂತ ಋತುವನ್ನು ಬಿಟ್ಟು ಇತರ ಋತುವುಗಳಲ್ಲಿಯೂ, ಕೃಷ್ಣ ಪಕ್ಷದಲ್ಲಿಯೂ, ಗಳಗ್ರಹ ತಿಥಿಯಲ್ಲಿಯೂ, ಅನಧ್ಯಾಯ ತಿಥಿಗಳಲ್ಲಿಯೂ, ಉಪನಯನ ಮಾಡಲ್ಪಟ್ಟವನಿಗೆ ಪುನರುಪನಯನ ಮಾಡತಕ್ಕದ್ದು.

ಮೂ॥ ಚೈತ್ರವೈಶಾಖಸಿತತೃತೀಯೆಮಾಘೇಚಸಪ್ತಮ್ಯಥಫಾಲ್ಗುಣೇಚ।
ಮೌಂಜೀವ್ರತಂತ ಸುಶುಭಂವದಂತಿವಸಿಷ್ಠಗಾರ್ಗ್ಯಾದಿಮುನೀಂದ್ರವರ್ಯಾಃ॥

ಟೀ॥ ಚೈತ್ರವೈಶಾಖ ಮಾಸಗಳಲ್ಲಿ, ಶುಕ್ಲ ಪಕ್ಷದ ತೃತೀಯಗಳೂ, ಮಾಘ ಫಾಲ್ಗುಣಮಾಸದಲ್ಲಿಶುಕ್ಲ ಪಕ್ಷದ ಸಪ್ತಮೀ, ಈತಿಥಿಗಳಲ್ಲಿ ಉಪನಯನವಂ ಮಾಡುವದು ಶುಭಕರವೆಂದು ವಸಿಷ್ಠಗಾರ್ಗ್ಯಾದಿಮುನಿಗಳಿಂದಹೇಳಲ್ಪಟ್ಟಧೆ.

ಮೂ॥ ಆಚಾರ್ಯಕಾವ್ಯಸೌಮ್ಯಾನಾಂವಾರಾಶ್ಶಸ್ತಾಶ್ಶುಭೋದಯೆ।ವಾ
ರೌತುಮಧ್ಯಫಲದಾವಿತರೌವ್ರತೇ॥

ಟೀ॥ ಶುಭಕಾರ್ಯದಲ್ಲಿ ಬೃಹಸ್ಪತಿ,ಶುಕ್ರ, ಬುಧವಾರಗಳು ಪ್ರಶಸ್ತಗಳು, ಆದಿತ್ಯ ಸೋಮ ವಾರಗಳು ಮಧ್ಯಮಗಳು,ಅಂಗಾರಕಶನಿವಾರಗಳು ಅಧಮಗಳು.

ಶ್ಲೋ॥ 'ಮಂದವಾರೇಮೌಂಜಿಬಂಧಂಯಃಕುರ್ಯಾದ್ವಟುನಾಶನಂ। ಅಂ
ಗಾರಕೆಮೌಂಜಿಬಂಧಂಯಜಮಾನೊಮೃತೊಭವೇತ್॥

ಟೀ॥ಶನಿವಾರದಲ್ಲಿ ಉಪನಯನಮಾಡಿದರೆ ವಟುನಾಶವಾಗುತ್ತಾನೆ, ಮಂಗಳವಾರದಲ್ಲಿ ಮಾಡಿದರೆ ಯಜಮಾನನು ಸಾಯುತ್ತಾರೆ.

ಮೂ॥ ಸಹಸ್ರಗುಣಯುಕ್ತೇಪಿಮಂದವಾರೆಕುಜೇತಥಾ । ಶುಭಕರ್ಮ
ನಕುರ್ವೀತಕುರ್ಯಾಚ್ಚೇನ್ಮರಣಂಧ್ರುವಂ॥

ಟೀ॥ಸಾವಿರಗುಣಗಳಿದ್ದರೂ ಶನ್ಯಂಗಾರಕವಾರಗಳಲ್ಲಿಶುಭಕರ್ಮಗಳಂನು ಮಾಡಕೂಡದು ಹಾಗೆ ಮಾಡಿದರೆ ಮರಣ ಸಂಭವಿಸುತ್ತದೆ.

ಮೂ॥ ವಿಭಜ್ಯಾಹ್ನಃಪ್ರಮಾಣಸ್ತುತತ್ರಾದ್ಯಂಶೆಪಿದೈವಿಕಂ । ದ್ವಿತೀ
ಯೆಮಾನುಷಂಕಾರ್ಯಂತೃತೀಯಾಂಶೆಪಿಪೈತ್ರಕಂ॥

ಟೀ॥ಹಗಲನ್ನು ಮೂರು ಭಾಗಮಾಡಿ ೧ನೇ ಭಾಗದಲ್ಲಿ ದೈವಕಾರ್ಯವನ್ನು, ೨ನೇಭಾಗದಲ್ಲಿ ಮನುಷ್ಯನ ಕಾರ್ಯವನ್ನು, ೩ನೇ ಭಾಗದಲ್ಲಿ ಪಿತೃಕಾರ್ಯಗಳನ್ನು ಮಾಡತಕ್ಕದ್ದು.

ಮೂ॥ ಏಕಸ್ಮಿನ್ಕೇಂದ್ರಗೇಜೀವೆಶುಕ್ರೇವಾಪಾಪಕೇಂದ್ರಜಾಃ । ದೋಷಾ
ವಿನಾಶಮಾಯಾಂತಿಪಾಪಂಭಾಗೀರಥೀಜಲಾತ್॥

ಟೀ॥ ಒಬ್ಬ ಬೃಹಸ್ಪತಿಯಾದರು, ಒಬ್ಬ ಶುಕ್ರನಾದರೂ ಕೇಂದ್ರಸ್ಥಾನಗಳ

ಲ್ಲದ್ದರೆ ಗಂಗಾಸ್ನಾನವು ಪಾಪಂಗಳನ್ನು ಪರಿಹರಿಸುವಂತೆ ಪಾಪಗ್ರಹಗಳು ಕೇಂದ್ರಸ್ಥಾನಗಳಲ್ಲಿ ಸೇರುವದರಿಂದುಂಟಾಗುವ ದೋಷಗಳೆಂಬುದ್ಧಹೋಗ ಲಾಡಿಸುವನು.

ಮೂ॥ಮಿತ್ರರಾಶಿಗತೇಜೀವೇ ಕೈ ವಾಪಾಪಕೇಂದ್ರಜಂ । ಹರೇನ್ನಸ್ಯಂ ಶಿವೋಚ್ಚಾರಸ್ಮರಣಂ ಪಾಪಸಂಚಯಂ ॥

ಟೀ॥ ಗುರುವಾದರೂ, ಶುಕ್ರನಾದರೂ, ಮಿತ್ರ ಕ್ಷೇತ್ರದಲ್ಲಿದ್ದರೆ ಪಾಪಗ್ರಹಗಳು ಕೇಂದ್ರಗಳಲ್ಲಿ ಇರುವ ದೋಷಗಳನ್ನು, ಹರಿಸ್ಮರಣೆಯು ಪಾಪಗಳನ್ನು ಹರಿಸುವಂತರಿ, ಹೋಗಲಾಡಿಸುತ್ತಾನೆ

ಶ್ಲೋ॥ ಅತಿಮಿತ್ರನವಾಂಶಸ್ಥೇ ಶಾಪೇಶೇಸತ್ರಿಕೋಣಗೇ ।ದೋಷೋವಿನಾಶಮಾಯಾಂತಿಗ್ರೀಷ್ಮೇ ಪುಸಲಿಲಂಯಥಾ ॥

ಟೀ॥ ಶಾಖಾಧಿಪತಿಯು ಅತಿಮಿತ್ರ ನವಾಂಶದಲ್ಲಿದ್ದರೂ ಪಂಚಮ ತ್ರಿಕೋಣಗಳಲ್ಲಿದ್ದರೂ ಗ್ರೀಷ್ಮಕಾಲದಲ್ಲ ನೀರುಗಳೊಂಗಿ ಹೋಗುವಂತೆ ಸಮಸ್ತ ದೋಷಗಳು ನಾಶವನ್ನು ಹೊಂದುತ್ತವೆ.

ಮೂ ॥ ಯತ್ರೈಕಾದಶಗಸ್ಸೂರ್ಯಶ್ಚಂದ್ರೋವಾಮಿತ್ರರಾಶಿಗಃ । ಹಂತಿ ಲಗ್ನೋದ್ಭವಂದೋಷಂಪೂತನಾಮಿವಕೇಶವಃ ॥

ಟೀ॥ ಲಗ್ನಕ್ಕೆ ೧೧ ರಲ್ಲ ಸೂರ್ಯನಿದ್ದರು ಚಂದ್ರನು ಅತಿಮಿತ್ರನವಾಂಶದಲ್ಲಿ ಇದ್ದರೂ,ಈ ಯೋಗವು ಬಾಲಕೃಷ್ಣನು ಪೂತನೆಯನ್ನು ಕೊಂದಂತೆ ಲಗ್ನದಿಂದ ಹುಟ್ಟಿದ ಸಮಸ್ತದೋಷಗಳನ್ನು ಹರಿಸುತ್ತದೆ.

ಮೂ॥ಅತಿಮಿತ್ರಗತಸ್ಸೂರ್ಯಶ್ಚಂದ್ರೋವಾಯದಿಲಾಭಗಃ । ಹಂತಿದೋಷಚಯನ್ನೃಷ್ಟತ್ಪಾಪಸಂಘಾಂಹರೆಸ್ಮೃತಃ ॥

ಟೀ॥ ಅತಿ ಮಿತ್ರಕ್ಷೇತ್ರದಲ್ಲಿರುವ ರವಿಯು ೧೧ ರಲ್ಲಿರುವ ಚಂದ್ರನು ಸಹ, ಹರಿಸ್ಮರಣವು ಪಾಪವನ್ನು ಹೋಗಲಾಡಿಸಿದಂತೆ ದೋಷ ಸಮೂಹವನ್ನು ಹರಿಸುತ್ತಾರೆ

ಮೂ॥ ತ್ರಿಷಷ್ಠಲಾಭಗೋಭೌಮಃಶಶೀವಾಯದಿತುಂಗಗಃ।ಸರ್ವದೋಷಚಯಂಹಂತಿಪಾಪಂಪಂಚಾಕ್ಷರೀಯಥಾ ॥

ಟೀ॥ ೩—೬—೧೧ ಈ ಸ್ಥಾನಗಳಲ್ಲಿರುವ ಕುಜನು ಉಚ್ಚಕ್ಷೇತ್ರದಲ್ಲಿರುವ ಚಂದ್ರನುಸಹ ಪಂಚಾಕ್ಷರೀ ಮಂತ್ರವು ಪಾಪಗಳನ್ನು ಹರಿಸುವಂತೆ ಸರ್ವದೋಷಗಳನ್ನು ಹರಿಸುತ್ತಾರೆ.

ಮೂ॥ ಸ್ವಕಮಿತ್ರಗತೋಭೌಮಶ್ಶಶೀವಾಯದಿಲಾಭಗಃ । ಹಂತಿದೋಷಚಯಂಸರ್ವಂಪಿನಾಕೀತ್ರಿಪುರಂಯಥಾ ॥

ಟೀ॥ ಮಿತ್ರಕ್ಷೇತ್ರದಲ್ಲಿರುವ ಕುಜನು ಲಾಭದಲ್ಲಿರುವ ಚಂದ್ರನುಸಹ ತ್ರಿ

ಪುರವನ್ನು ಈಶ್ವರನು ಹೊಡದಂತೆ ಸರ್ವದೋಷಗಳನ್ನು ಪರಿಹರಿಸುತ್ತಾರೆ.

ಮೂ॥ ಲಗ್ನಾತ್ತ್ರಿಷಷ್ಠಗಸ್ಸೂರ್ಯಸ್ಸ್ವತುಂಗಸ್ಥೋಭವೇದ್ಯದಿ। ನಾಶಯು
ತ್ಯಖಿಲಾನ್ದೋಷಾಂಸ್ಸೂರ್ಯೋದಯ ತ್ತಿಮಿರಂಯಥಾ ॥

ಟೀ॥ ಉಪನಯನ ಲಗ್ನಕ್ಕೆ ೩–೬ ಈ ಸ್ಥಾನಗಳಲ್ಲಿ ಸೂರ್ಯನು ಉಚ್ಚಗತನಾಗಿದ್ದರೆ ಸೂರ್ಯೋದಯದಲ್ಲಿ ಅಂಧಕಾರದಂತೆ ಸರ್ವದೋಷಗಳೂ ನಾಶವನ್ನು ಹೊಂದುತ್ತವೆ

ಮೂ॥ ಕೇಂದ್ರತ್ರಿಕೋಣಗಃ ಸೌಮ್ಯೋ ಮಿತ್ರರಾಶ್ಯಂಶಗೋಪಿವಾ। ಪಾ
ಪಕೇಂದ್ರಕೃತಾನ್ದೋಷಾನ್ ಹಂತಿಭಂ ಕೇಸರೀಯಥಾ॥

ಟೀ॥ ಬುಧನು ಲಗ್ನದ ಕೇಂದ್ರತ್ರಿಕೋಣಗಳಲ್ಲಾದರೂ ಮಿತ್ರರಾಶ್ಯಂಶಗಳಲ್ಲಿಯಾದರೂ ಇದ್ದರೆ ಈ ಯೋಗವು ಕೇಂದ್ರದಲ್ಲಿ ಪಾಪಗ್ರಹಗಳಿರುವದೋಷಗಳನ್ನು ಸಿಂಹವು ಆನೆಗಳನ್ನು ಹೊಡಿಯುವಂತೆ ನಾಶ ಮಾಡುವದು.

ಮೂ॥ ಲಗ್ನಾದಿಪೋವಾಂಶಪತಿರ್ಬಲಿಷ್ಠಃ ಕೇಂದ್ರತ್ರಿಕೋಣತ್ರಿಭವೇ ಸ್ಥಿ
ತೋಪಿ । ಲಗ್ನಸ್ಯ ಕೇಂದ್ರೇಷ್ವಶುಭಸ್ಥದೋಷಾನ್ನಿಹಂತಿಶ ಮ
ವೈ ರ್ಯುತ ವೀಕ್ಷಿತೋವಾ ॥

ಟೀ॥ ಲಗ್ನಾಧಿಪತಿಯಾದರೂ ನವಾಂಶಾಧಿಪತಿಯಾದರೂ ಬಲಿಷ್ಠನಾಗಿ ೧–೩–೪–೫–೭–೧೧ ಈ ಸ್ಥಾನಗಳಲ್ಲಿ ಶುಭಗ್ರಹಗಳಿಂದ ನೋಡಲ್ಪಟ್ಟವನಾಗಿಯೂ ಕೂಡಿದವನಾಗಿಯು ಇದ್ದರೆ ಲಗ್ನಕ್ಕಿಂತೆ ಅನ್ಯಕೇಂದ್ರಗಳಲ್ಲಿ ಪಾಪಗ್ರಹಗಳಿರುವ ದೋಷಗಳನ್ನು ಹರಿಸುತ್ತಾರೆ.

ಮೂ॥ ವಿದ್ಯಾಂ ವಟೋರ್ವಿನಶ್ಯೇತಾಂ ಮಂದಭೌಮೌ ದ್ವಿತೀಯಗೌ। ಅ
ನ್ಯೋನ್ಯ ಮಧವಾಷ್ಟಸ್ಥೌ ದ್ವಾದಶಸ್ಥೌ ತುಬಂಧನಂ॥

ಟೀ॥ ಉಪನಯನಕ್ಕೆ ಅಂಗಾರಕ ಶನಿಗಳು ದ್ವಿತೀಯಸ್ಥಾನದಲ್ಲಿದ್ದರೆ ವಟುವಿಗೆ ವಿದ್ಯಾ ನಾಶವನ್ನು ಮಾಡುತ್ತಾರೆ, ಅವರುಗಳೊಬ್ಬರಿಗೊಬ್ಬರು ಅಷ್ಟಮದಲ್ಲಾದರೂ ದ್ವಾದಶದಲ್ಲಾದರೂ ಇದ್ದರೆ ಆ ವಟುವಿಗೆ ಬಂಧನವನ್ನುಂಟು ಮಾಡುತ್ತಾರೆ

ಮೂ॥ ಕುಜಾರ್ಕಜೌ ಬಂಧನದೌ ವ್ಯಯಸ್ಥೌ ವಿದ್ಯಾಪ್ರದೌ ವಾಧನ
ಬಂಧಸಂಸ್ಥೌ । ವ್ಯಯಸ್ಥಮರ್ಕಂ ಕ್ಷಿತಿಜೋವಿಪಶ್ಯನ್ನಾಚಾರ್ಯ
ಮಂಧಂ ಕುರುತೇಬಲಾಢ್ಯಃ ॥

ಟೀ॥ ಕುಜ ಶನಿಗಳು ೧೨ನೇ ಸ್ಥಾನದಲ್ಲಿದ್ದರೇ ವಟುವಿಗೆ ಬಂಧನ ಉಂಟಾಗುವದು, ಅವರುಗಳು ೬–೮ ಈ ಸ್ಥಾನಗಳಲ್ಲಿದ್ದರೇ ವಿದ್ಯೆಯನ್ನುಂಟು ಮಾಡುತ್ತಾರೆ, ಅವರಲ್ಲಿ ಬಲಿಷ್ಟನಾದ ಅಂಗಾರಕನು ೧೨ನೇ ರಾಶಿಯಲ್ಲಿ ಇರುವ ಸೂರ್ಯನನ್ನು ನೋಡದ ವೇಳಾನನಾಗಿ ಪ್ರತ್ಯೋಪದೇಶ ಮಾಡುವ ಗು

ರುವನ್ನು ಕುರುಡನನ್ನಾಗಿ ಮಾಡುತ್ತಾನೆ

ಮೂ|| ವ್ಯಯಸ್ಥಂ ರವಿಮಾರ್ಕಿರಾಹ್ವಾಸ್ಸ್ವದೃಷ್ಟ್ಯಾ ಯದಿ ಪಶ್ಯತಿ | ಶಿಷ್ಯವಿದ್ಯಾಂ ಬಲೀ ಹನ್ಯಾದ್ದ್ವಿಬಲೀ ರೋಗದಃ ಶಿಶೋಃ ||

ಟೀ|| ದ್ವಾದಶಸ್ಥಾನದಲ್ಲಿರುವ ಸೂರ್ಯನನ್ನು ಶನಿ ಬಲಿಷ್ಠನಾಗಿ ತನ್ನ ೩-೭-೧೦ ಈ ದೃಷ್ಟಿಗಳಿಂದ ನೋಡಿದರೆ ಶಿಷ್ಯನಿಗೆ ವಿದ್ಯಾನಾಶವನ್ನು ಮಾಡುತ್ತಾನೆ ದುರ್ಬಲನಾಗಿ ನೋಡಿದರೆ ಶಿಶುವಿಗೆ ರೋಗವನ್ನುಂಟುಮಾಡುತ್ತಾನೆ.

ಲಗ್ನಚಂದ್ರಫಲವು—ನಾರದೀಯದಲ್ಲಿ

ಮೂ|| ಪ್ರಾಲೇಯರಶ್ಮೌ ಯದಿ ಲಗ್ನಸಂಸ್ಥೇ ವಲಕ್ಷಪಕ್ಷೇಪಿ ಭವೇತ್ಸರೋಗೀ |
ಮೃತೀಚ ಸೌಮ್ಯಗ್ರಹವರ್ಗಗೇಪಿ ಬಾಲೋ ನಿಸ್ಸ್ವಃ ಕೃತಿಕರ್ಮಹೀನಃ ||

ಟೀ|| ಶುಕ್ಲಪಕ್ಷವಲ್ಲಿಯೂ ಚಂದ್ರನು ಲಗ್ನದಲ್ಲಿದ್ದರೂ ಶುಭಗ್ರಹವರ್ಗದಲ್ಲಿದ್ದರೂ ಆ ಹುಡುಗನನ್ನು ರೋಗಿಷ್ಠನನ್ನಾಗಿಯೂ, ದುಷ್ಟನನ್ನಾಗಿಯೂ ದರಿದ್ರನನ್ನಾಗಿಯೂ ಕರ್ಮಹೀನನನಾಗಿಯೂ ಮಾಡುತ್ತಾನೆ.

ಕಾಶ್ಯಪದಲ್ಲಿ.

ಮೂ|| ಸ್ವೋಚ್ಚಸಂಸ್ಥೋಪಿ ಶೀತಾಂಶುಸ್ತ್ರಿಸಂಧ್ಯಾ ವಿಲಗ್ನಗಃ | ತಂ ಕರೋತಿ ವಟುಂ ನಿಸ್ವಂ ಸತತಂ ಕ್ಷಯರೋಗಿಣಂ ||

ಟೀ|| ಚಂದ್ರನು ಉಚ್ಚಸ್ಥಾನದಲ್ಲಿದ್ದರೂ ಲಗ್ನದಲ್ಲಿದ್ದರೂ ವಟುವನ್ನು ಆ ಲಾಗಾಯಿತು ದರಿದ್ರನನ್ನಾಗಿಯೂ, ಕ್ಷಯರೋಗಿಯನ್ನಾಗಿಯೂ ಮಾಡುತ್ತಾನೆ.

ಇಲ್ಲಿ ಗರ್ಗಮುನೀಶ್ವರನು ಮಾಡಿದ ವ್ಯವಸ್ಥೆ ಯೇನೆಂದರೆ

ಮೂ|| ಪ್ರಾಲೇಯರಶ್ಮೌ ಯದಿ ಲಗ್ನಸಂಸ್ಥೇ ವಲಕ್ಷಪಕ್ಷೇ ಶುಭಕೃನ್ನಿತಾಂತಂ | ಸೋಪಿ ಹಸೌಮ್ಯಗ್ರಹವರ್ಗಗಶ್ಚೇದ್ವಟೋರಾಯುರಾರೋಗ್ಯ ಸುಖಾನಿ ದದ್ಯಾತ್

ಟೀ|| ಶುಕ್ಲಪಕ್ಷದ ಚಂದ್ರನು ಉಪನಯನ ಲಗ್ನದಲ್ಲಿದ್ದರೆ ಶುಭವನ್ನುಂಟುಮಾಡುವನು, ಮತ್ತು ಶುಭಗ್ರಹಷಡ್ವರ್ಗದಲ್ಲಿದ್ದರೆ ವಟುವಿಗೆ ವಿಶೇಷವಾಗಿ ಆಯುಸ್ಸು, ಆರೋಗ್ಯ ಐಶ್ವರ್ಯ, ಸೌಖ್ಯ, ಇವುಗಳನ್ನು ಕೊಡುವನು

ಲಗ್ನದೋಷಕ್ಕೆ ಭಂಗವು ಗರ್ಗ

ಮೂ|| ಲಗ್ನೇ ಕುಳೀರೇ ಗುರುಚಂದ್ರಸಂಸ್ಥೇ ಪಂಚತ್ರಿಕೋಣೇಷು ಸಿತೇ ಗತೇ ಚ [illegible]
ತೃತೀಯಷಷ್ಠೇ ಯುಗತೇ ಗ್ರಹೇ [illegible] ||

ಟೀ|| ಕಟಕವು ಲಗ್ನವಾಗಿದ್ದು ಅಲ್ಲಿ ಗುರುಚಂದ್ರರು ಇದ್ದರೆ ಮತ್ತು ೫, ಶುಕ್ರಬುಧರು ಮೇಷಲಗ್ನದಲ್ಲಿ ಇರುವಾಗಲೂ, ವೃಷಭಲಗ್ನದಲ್ಲಿ ಸೂರ್ಯನು ಇರುವಾಗಲೂ, ಮಿಕ್ಕ ಶನಿ ಅಂಗಾರಕ ಮೊದಲಾದವರು ೩-೬- [illegible]

ದಲ್ಲಿರುವಾಗಲೂ, ಉಪನಯನ ಮಾಡಲ್ಪಟ್ಟ ಹುಡುಗನು ಐಶ್ವರ್ಯವನ್ನು ಹೊಂದುವನು.

ಮೂ॥ ಕೇಂದ್ರೇಸುರೇಜ್ಯೇಭವನೇಪತಂಗೇಚಂದ್ರೇಶುಭಾಂಶೇವಟಿನೋವ್ರತೇಷು।
ವಾಗೀಶ್ವರೀತಸ್ಯಮುಖೇನಸಂತಿಪದ್ಮಾಯಥಾಪದ್ಮವನೇಸದಾಚ॥

ಟೀ॥ ಗುರುವು ಉಪನಯನ ಲಗ್ನಕ್ಕೆ ೧-೪-೭-೧೦ನೇ ಸ್ಥಾನಗಳಲ್ಲಿದ್ದರೂ, ಸೂರ್ಯನು ಉಪನಯನ ಲಗ್ನದಲ್ಲಿದ್ದರೂ ಚಂದ್ರನು, ಶುಭನವಾಂಶವನ್ನು ಪಡೆದು ೩ನೇ ಸ್ಥಾನವನ್ನಪಡೆದರೆ ಆ ವಟುವಿನ ಮುಖದಲ್ಲಿ ಸರಸ್ವತಿಯು ಯಾವಾಗ್ಯೂ ಕಮಲವನದಲ್ಲಿ ಲಕ್ಷ್ಮೀಯಂತೆ ವಾಸಮಾಡುವಳು.

ಮೂ॥ ಲಗ್ನೇಸಿತಃಕರ್ಮಣಿದೇವಪೂಜ್ಯೇಬವೇಪ್ರವಿಷ್ಟೇರವಿಶೀತರಶ್ಮಿಭಾಂ
ಶೇ।ಹೃದಿಸ್ಥಶಾಸ್ತ್ರಾಣ್ಯಪಿವರ್ಧಯಂತಿಪ್ರಿಯಕ್ಷಣೇಸ್ವೈವಯಥೇಂದ್ರಿಯಾಣಿ॥

ಟೀ॥ ಉಪನಯನ ಲಗ್ನದಲ್ಲಿ ಶುಕ್ರನು, ಕರ್ಮಸ್ಥಾನದಲ್ಲಿ ಗುರುವು, ಶುಭನವಾಂಶದಲ್ಲಿ ಸೂರ್ಯನೂ ಚಂದ್ರನು ಇವರುಗಳು ಇದ್ದರೆ ವಟುವಿನ ಹೃದಯದಲ್ಲಿ ಸರ್ವಶಾಸ್ತ್ರವೂ ವೃದ್ಧಿ ಹೊಂದುವವು.

ಮೂ॥ಭೃಗೌಮೀನೇವೃಷೇವಾಪಿಜೀವೇಕೇಂದ್ರತ್ರಿಕೋಣಗೇ। ಕರ್ಕಿಚಾ
ಪಝಷೇತಸ್ಮಿನ್ಯೋಗಃಶುಭತರಾಹ್ವಯಃ ॥

ಟೀ॥ ಶುಕ್ರನು ಮೀನ, ವೃಷಭ ಈರಾಶಿಗಳಲ್ಲಿದ್ದರೂ ಬೃಹಸ್ಪತಿಯು ಕೇಂದ್ರತ್ರಿಕೋಣದಲ್ಲಿದ್ದರೂ ಅಥವಾ ಕಟಕಧನಸ್ಸು ಮೀನಗಳಲ್ಲಿದ್ದರೂ ವಟುವಿಗೆ ಅತ್ಯಂತ ಶುಭವೆಂಬ ಯೋಗ ಉಂಟಾಗುವದು

ಮೂ॥ ಜೀವಃಕಾವ್ಯೋಪಿವಾಯುಕ್ತಮ್ಮೌಂಜೀಬಂಧನಲಗ್ನಗಃ। ತಸ್ಯ
ವಿದ್ಯಾಪ್ರಭೂತಾಸ್ಯಾದ್ವಿವಾಹಶ್ಚಾಚಿರಾದ್ಭವೇತ್॥

ಟೀ॥ಗುರುವಾದರೂ ಶುಕ್ರನಾದರೂ ಉಪನಯನ ಲಗ್ನದಲ್ಲಿದ್ದರೆ ವಟುವಿಗೆ ಸಕಲ ವಿದ್ಯೆಗಳುಬರುವವು, ಶೀಘ್ರವಾಗಿ ಅವನಿಗೆಮದುವೆಯೂ ಆಗುವದು

ಮೂ॥ ದೋಷೇಬಲವಿಹೀನೇಚಗುಣೇಬಹುಬಲೈರ್ಯುತೇ। ಅಪವಾದಬಲೈ
ರ್ದೋಷಪ್ರಧ್ವಂಸೋಭಾವಕಶ್ಶುಭಃ ॥

ಟೀ॥ ದೋಷಗಳು ಬಲಹೀನವಾಗಿಯೂ, ಗುಣಗಳು ಬಲಿಷ್ಠವಾಗಿಯೂ ಇದ್ದರೆ ವಿಶೇಷ ಶಾಸ್ತ್ರದಿಂದ ಉಪನಯನ ಮುಹೂರ್ತಕ್ಕೆ ವಿಶೇಷ ಶುಭವುಂಟಾಗುವದು.

ಮೂ॥ ಕರ್ತುರ್ಭಾರ್ಯಾಗರ್ಭಿಣೀಚೇದ್ವಾಸ್ತುಕರ್ಮೋಪನಾಯನಂ।
ಷಣ್ಮಾಸಾತ್ಪರತಸ್ಸೋಪಿನಕುರ್ಯಾದಿತಿಶೌನಕಃ॥

ಟೀ॥ ಪುರುಷನು ತನ್ನ ಹೆಂಡತಿಯು ಗರ್ಭವತಿಯಾದ ೬ತಿಂಗಳಮೇಲೆಗೃಹನಿರ್ಮಾಣವನ್ನಾದರೂ, ಮಗನ ಉಪನಯನವನ್ನಾದರೂ ಮಾಡಕೂಡದು.

೫ ತಿ ಗಳವರಿಗೆ ಮಾಡಬಹುದೆಂದು ತಾತ್ಪರ್ಯವು.

ಮೂ॥ ರಜಸ್ವಲಾ ವಟೋರ್ಮಾತಾ ನಾಂದೀವಾಚನತಃ ಪುರಾ।
ನೈವೋಪನಯನಂ ಕಾರ್ಯಂ ಪರತಶ್ಚೇತ್ತು ಬಂಜಗುಃ॥

ಟೀ॥ ನಾಂದಿ ಆವಾಹನಕ್ಕೆ ಮುಂಪಾಗಿಯೇ ಆ ಹುಡುಗನ ತಾಯಿ ರಜಸ್ವಲೆ ಯಾದರೆ ಉಪನಯನವ ಮಾಡಕೂಡದು. ನಾಂದಿಯಾದ ತರುವಾಯ ವಾದರೆ ಉಪನಯನ ಮಾಡಬಹುದು

ರಜಸ್ವಲಾದೋಷಭಂಗವು

ಮೂ॥ ಅಲಬ್ಧೇ ಸುಮುಹೂರ್ತಸ್ಯ ರಜೋದೋಷೇ ಚ ಮಾತರಂ।
ಸ್ತ್ರಿಯಂ ಸಂಪೂಜ್ಯ ತತ್ಕಾರ್ಯಾಂ ತ್ಯಜೇ ಬಂಧನಮುತ್ತಮಂ॥

ಟೀ॥ ಉಪನಯನಮುಹೂರ್ತಕ್ಕೆ ರಜಸ್ವಲಾದೋಷವು ಪ್ರಾಪ್ತವಾಗದೆ ಇರುವಾಗ ತಾಯನ್ನು ಪೂಜಿಸಿ ಶುಭಕರ್ಮವನ್ನು ಮಾಡತಕ್ಕದ್ದು.

ಮೂ॥ ಶಾಖಾಧಿಪತಿವಾರಶ್ಚ ಶಾಖಾಧಿಪಬಲಂ ಶಿಶೋಃ।
ಶಾಖಾಧಿಪತಿಲಗ್ನಂ ಚ ದುರ್ಲಭಂ ತ್ರಿತಯಂ ವ್ರತೇ॥

ಟೀ॥ ಉಪನಯನದಲ್ಲಿ ಮಗುವಿನ ಶಾಖಾಧಿಪನ ವಾರವೂ, ಅವನಬಲವು, ಅವನಲಗ್ನವು, ಈ ಮೂರೂ ದುರ್ಲಭವಾಗಿರುವುದು.

ಮೂ॥ ನಸ್ಯಾಧನರ್ಕ್ಷಧ ಶುದ್ಧಿಲಗ್ನಂ ನಸ್ಯೈಧನರ್ಕ್ಷಂ ನಚ ತಂ ನವಾಂಶಂ।
ನಸ್ಯೈಧನಸ್ಯೈಶೋನ ಚ ವಾಂತ್ಯಕೇಶೋ ಲಗ್ನೇ ಪ್ರಶಸ್ತಂ ಖಲುರಾಶಿರಾಧಃ॥

ಟೀ॥ ಉಪನಯನಲಗ್ನವು ವಟುವಿನ ಜನ್ಮರಾಶಿಗೆ ಅಷ್ಟಮವಾಗಿರಕೂಡದು, ಅಷ್ಟಮಾಂಶವಾಗಿಯೂ ಇರಕೂಡದು ನ್ಯೂನತಾರವಾಗದು, ಉಪನಯನಲಗ್ನಕ್ಕೆ ಅಷ್ಟಮದಲ್ಲಿಯೂ ದ್ವಾದಶದಲ್ಲೂ ಚಂದ್ರನಿರಕೂಡದು ಏವಂಚ ಲಗ್ನವು ಅಷ್ಟಮಶುದ್ಧಿಯುಳ್ಳದ್ದಾಗಿಯು ಶುಭಗ್ರಹಸಹಿತವಾಗಿಯೂ ಇರಬೇಕು.

ಕೇಂದ್ರದಲ್ಲಿರುವ ಸೂರ್ಯಾದಿ ಪಾಪಗ್ರಹಗಳ ಫಲವು.

ಮೂ॥ ಕುಜೇ ಚೇತ್ಕುಜಿತೋ ದೋಷಶ್ಶಿಷ್ಯಾಚಾರ್ಯ ವಿನಾಶನಂ।
ಮಂದತೋ ರುಧಿರೋ ದೋಷಃ ಕರೋತಿ ಮಹತೀಂ ಗದಾಂ॥
ರಾಹೌ ಚಂಧ್ರಾಹ್ವಯೋ ದೋಷಶ್ಶಿಶೋರ್ಮಾತೃವಿನಾಶನಂ।
ಕೇತೌ ಕೇಂದ್ರೇ ತೂಗ್ರದೋಷೋ ವಿದ್ಯಾಯುರ್ಧನನಾಶನಂ॥
ಪಂಚದೋಷೇತರಂ ಲಗ್ನಂ ಶುಭದಂ ಚೋಪನಾಯನೇ।
ದ್ವಾದಶಸ್ಥಂ ರವಿಂ ಭಾನೌ ಪಶ್ಯನ್ನಾಚಾರ್ಯನೇತ್ರಹೃತ್॥

ಟೀ॥ ಉಪನಯನಲಗ್ನಕ್ಕೆ ಕೇಂದ್ರಗಳಲ್ಲಿ ಅಂಗಾರಕ ನಿದ್ದರೆ ಕೂಜಿತವೆಂಬದಾಗಿ ಒಂದು ದೋಷ ಉಂಟಾಗುತ್ತದೆ ಅದು ಗುರು ಶಿಷ್ಯರಿಗೆ ನಾಶಕವು, ಶನಿಇದ್ದರೆ ರುಧಿರವೆಂಬ ದೋಷವು, ಅದು ಹುಡುಗನಿಗೆ ಮಹಾ

ರೋಗಕರನು, ರಾಹುವಿದ್ದರೆ ಧನವಿಚ್ಛೇದವನ್ನು, ಶನಿ ಹುಡುಗನ ತಾಯಿಗೆ ನಾಶಕರನು, ಕೇತುವಿದ್ದರೆ ಉಗ್ರವೆಂಬ ದೋಷವು, ಅದು ವಿದ್ಯೆ, ಧನ, ಇವುಗಳಿಗೆ ನಾಶಕರನು, ಹೀಗೆ ಈ ದೋಷಗಳೆಲ್ಲಾ ಲಗ್ನದಲ್ಲಿ ವಟು ವಿನ ಉಪನಯನವು ನಾಶಕರವು ಇದಲ್ಲದೆ ಉಪನಯನದ ಲಗ್ನಕ್ಕೆ ದ್ವಾದಶದಲ್ಲಿರುವ ಸೂರ್ಯನನ್ನು ಅಂಗಾರಕನು ನೋಡುವರೆ ಆಚಾರ್ಯನ ಕಣ್ಣು ಹೋಗುವದು

ಮೂ॥ ಸರ್ವತ್ರಶುಭದಶ್ಶುಕ್ರೋ ರಿಃಫಷಷ್ಠಾಷ್ಟವರ್ಜಿತಾ।
ಷಷ್ಠಾಷ್ಟವ್ಯಯವರ್ಜಿತಾಜೀವಸ್ಸರ್ವತ್ರಶುಭಕೃತ್ಸದಾ॥

ಟೀ॥ ಶುಕ್ರನು ೬-೮-೧೧ ಈ ಸ್ಥಾನಗಳನ್ನು ಬಿಟ್ಟು ಕಡವು ಸ್ಥಾನಗಳೆಲ್ಲಾ ಶುಭಪ್ರದನು, ಗುರುವು ೬-೮ ಸ್ಥಾನಗಳನ್ನು ಬಿಟ್ಟು ಕಡವು ಸ್ಥಾನಗಳಲ್ಲೆಲ್ಲಾ ಶುಭಕರನು.

ಮೂ॥ ವಿಶೇಷಾನ್ನೈಧನಸ್ಥಾನೇ ಸರ್ವೇತೇಸ್ಯುರ್ದುರಾಗ್ರಹಾಃ।
ಆಚಾರ್ಯಂತಂಶುಭಾಘ್ನಂತಿಶಿಷ್ಯಘ್ನಂತಿಪಾಪಿತರಾಃ॥

ಟೀ॥ ಉಪನಯನ ಲಗ್ನಕ್ಕೆ ಅಷ್ಟಮಸ್ಥಾನದಲ್ಲಿ ಸರ್ವಗ್ರಹಗಳೂ ಅಶುಭಕರವು, ಅದರಲ್ಲಿ ಶುಭಗ್ರಹಗಳು ಇದ್ದರೆ ಗುರುವಿಗೆ ನಾಶಕರವು, ಪಾಪಗ್ರಹಗಳು ಇದ್ದರೆ ಶಿಷ್ಯನಿಗೆ ನಾಶವನ್ನು ಮಾಡುತ್ತಾರೆ

ಅನಂತರ ಒಂದೇದಿನದಲ್ಲಿ ವಿವಾಹೋಪನಯನವಿಷಯ.

ಮೂ॥ ವಿವಾಹೋಪನಯನ್ಯತ್ರತ್ವೇಕಸ್ಮಿನ್ದಿವಸೇ ಯದಿ।
ಮೇಖಲಾಬಂಧನಮ್ಪೂರ್ವಮ್ಪಶ್ಚಾದ್ವೈವಾಹಿಕಂ ಚರೇತ್॥

ಟೀ॥ ಒಂದೇದಿನದಲ್ಲಿ ವಿವಾಹವನ್ನು ಉಪನಯನವನ್ನು ಮಾಡಬೇಕಾಗಿದ್ದರೆ ಮೊದಲು ಉಪನಯನವನ್ನು ಮಾಡಿ ತರುವಾಯ ವಿವಾಹವನ್ನು ಮಾಡತಕ್ಕದ್ದು.

ಮೂ॥ ಚೌಲೋಪನಯಸೀಮಂತಜಾತನಾಮಾನ್ನಪುಂಸವೇ।
ಚಾತುರ್ಮಾಸ್ಯಾದಿಸರ್ವೇ ತು ಸೋದರಾಣಾಂಪೃಥಗ್ಜಿತೇ॥

ಟೀ॥ ತಂದೆಯು ಏಕೋದರರಾದ ತನ್ನ ಮಕ್ಕಳಿಗೆಲ್ಲರಿಗೂ ಒಂದೇ ಸಾರಿ ಚೌಲ, ಉಪನಯನ, ಸೀಮಂತ ಜಾತ ಕರ್ಮ, ನಾಮಕರಣ, ಅನ್ನಪ್ರಾಶನ, ಪುಂಸವನ, ವೇದವ್ರತ, ಪ್ರಥಮ ಶ್ರಾವಣ ಹೋಮ ಈ ಕರ್ಮಗಳನ್ನು ಒಂದೇಸಾರಿ ಮಾಡಕೂಡದು ಒಬ್ಬೊಬ್ಬನಿಗೆ ಪ್ರತ್ಯೇಕ ಪ್ರತ್ಯೇಕ ಮಾಡತಕ್ಕದ್ದು.

ವೇದಾರಂಭವು

ಮೂ॥ ಹಸ್ತಾಶ್ವಯುಕ್ಶ್ರವಣತಿಷ್ಯಸವಿತಾರಮಿತ್ರಾಂಕಿತಾಪಚಿತಿಸ್ಮೃತ

ದ್ರನು ಬಲವಂತನಾಗಿರುವಾಗಲು, ರಿಕ್ತತಿಥಿಗಳನ್ನು ಬಿಟ್ಟು ರೋಹಿಣೀ, ಉತ್ತರಾ, ಉಷಾ, ಉಭಾ, ರೇವತೀ, ಮಖಾ, ಸ್ವಾತೀ, ಅನೂ, ಮೃಗಶಿರ, ಹಸ್ತ, ಮೂಲ, ಈ ನಕ್ಷತ್ರಗಳಲ್ಲಿಯೂ, ಕುಜ, ರವಿ, ಶನಿವಾರಗಳನ್ನು ಬಿಟ್ಟು ಕಡಮೆ ವಾರಗಳಲ್ಲೂ ವಿವಾಹಲಗ್ನವನ್ನು ಮಾಡತಕ್ಕದ್ದು.

ಮೂ॥ ಶ್ರೇಷ್ಠಾಸ್ತೌಳಿಯಮಾಂಗನಾಘಟಧನುಗೋಕರ್ಕಿಕಂಠೀರ
ವಾಃಮಧ್ಯಾಸ್ಸೌಮ್ಯಯುತಾಸ್ತದೂರ್ಧ್ವಕರಹಿತಾಸ್ಸರ್ವೆವಿವಾಹೆಹಿತಾಃ।
ಸಾವ್ಯಾಃಕೇಂದ್ರಧನಾಯು ಪುತ್ರಸಹಿತಾಃ ಸ್ಯುಃಪಾಪಷಷ್ಠಾಯಗಾಃ
ಪೂಜ್ಯಾಶುಕ್ರಗುರೂಮೃತಾವಶುಭದಾಃಶುದ್ಧೋಭವೆತ್ಸಪ್ತಮಃ॥

ಟೀ॥ ವಿವಾಹದಲ್ಲಿ ತುಲಾ, ಮಿಥುನ, ಕನ್ಯಾ, ಕುಂಭ, ಧನುಸ್ಸು, ವೃಷಭ, ಕರ್ಕಾಟಕ, ಸಿಹ್ಮ ಈ ರಾಸಿಗಳು ಶುಭಗಳು, ಇತರ ರಾಶಿಗಳು ಮಧ್ಯಮಗಳು, ಸರ್ವರಾಶಿಗಳು ಪಾಪಗ್ರಹಸಂಬಂಧವಿಲ್ಲದೆ ಶುಭಗ್ರಹಗಳೊಂದಿಗೆ ಕೂಡಿಇದ್ದರ ಶುಭಕರಗಳಾಗಿಯೇಇರುವವು, ಶುಭಗ್ರಹಗಳು ೧-೨-೪-೫-೧೦ ೧೧ ಈಸ್ಥಾನಗಳಲ್ಲಿ ಇದ್ದರು ಪಾಪಗ್ರಹಗಳು ೩-೬-೧೧ ಈರಾಶಿಗಳಲ್ಲಿ ಇರುವಾಗಲು ಶುಭಫಲವುಂಟಾಗುತ್ತದೆ ಗುರು ಶುಕ್ರರು ಮೂಢರೂ, ಅಸ್ತಂಗತರಾಗಿಯೂ ಇದ್ದರೆ ಅಶುಭಕರವು. ಏವಂಚಗುರು ಶುಕ್ರರಿಗೆ ಮೂಢ್ಯ ಅಸ್ತಮನಗಳಿಲ್ಲದೆ ಇರುವಾಗಲೂವಿವಾಹ ಲಗ್ನಕ್ಕೆ ಸಪ್ತಮಶುದ್ಧಿ ಇರುವಾಗಲೂ ವಿವಾಹನು ಶುಭಕರವಾಗುವದು.

## ವಿವಾಹಪ್ರಶ್ನವು.

ಮೂ॥ಶುಭೆದಿನೆದೆವವಿದಂತ್ವಭಿಜ್ಞಂತಾಂಬೂಲ ಪುಷ್ಪಾಕ್ಷತಪೂರ್ಣಪಾಣಿಃ । ಕರಾತ್ತಜಗತ್ವಾಪ್ರಣಿಪತ್ಯಪೃಚ್ಛೆನ್ನಿವೆದ್ಯತಸ್ಮೈವರಕನ್ಯಯೋರ್ಭಂ॥

ಟೀ॥ ವಿವಾಹವನ್ನು ಮಾಡಿಸುವನು ಶುಭದಿನದಲ್ಲಿ ಪುಷ್ಪ ತಾಂಬೂಲಗಳೆನ್ನು ಕೈಯಲ್ಲಿ ತೆಗದುಕೊಂಡು ಜ್ಯೋತಿಶ್ಶಾಸ್ತ್ರವನ್ನು ತಿಳಿದ ಬ್ರಾಹ್ಮಣನ ಬಳಿಗೆ ಹೋಗಿ ವಂದನ ಮಾಡಿ ಕನ್ಯಾವರರನಕ್ಷತ್ರಗಳನ್ನು ತಿಳಿಸಿ ವಿವಾಹವನ್ನು ಕುರಿತು ಪ್ರಶ್ನೆ ಮಾಡತಕ್ಕದ್ದು.

## ಗೋತ್ರವರ್ಜ್ಯ.

ಮೂ॥ ಸ್ವಗೋತ್ರಪ್ರವರೋಪೆತಾಹೀನಾದಿಕಮುಲೋದ್ಭವಾ।
ಕನ್ಯಾವಯೋಧಿಕಾನೆಷ್ಟಾದುರ್ಲಕ್ಷಣಗುಣಾನ್ವಿತಾ॥

ಟೀ॥ವರನಗೋತ್ರದವಳಾಗಿಯೂ,ಪ್ರವರವುಳ್ಳವಳಾಗಿಯೂ,ವರನಗಿಂತೆ ಉತ್ತಮಕುಲದಲ್ಲಿ ಹುಟ್ಟಿದವಳಾಗಿಯೂ, ಹೀನಕುಲದವಳಾಗಿಯೂ, ವರನಿಗಿಂತ ದೊಡ್ಡವಳಾಗಿಯೂದುರ್ಲಕ್ಷಣಗುಣಗಳುಳ್ಳವಳಾಗಿ ಇರುವ ಕನ್ಯೆಕೆಯನ್ನು ಬಿಡತಕ್ಕದ್ದು.

ಮೂ॥ಕುಲಂಚಶೀಲಂಚವಪುರ್ವಯಶ್ಚ ವಿದ್ಯಾಂಚವಿತ್ತಂಚಸನಾಥತಾಂಚ।
ಏತಾನ್ಗುಣಾಂತ್ಸಪ್ತ ಪರೀಕ್ಷ್ಯದೇಯಾಃಕನ್ಯಾಬುಧೈಶ್ಶೇಷಮಚಿಂತನೀಯಂ॥

ಟೀ॥ ವರನಕುಲ, ನಡತೆ, ದೇಹ, ವಯಸ್ಸು, ವಿದ್ಯೆ, ಧನ,ಪಾಲಕರು, ಈ ೭ಗುಣಗಳನ್ನು ಪರೀಕ್ಷಿಸಿ ಕನ್ಯೆಯನ್ನು ಕೊಡಬೇಕು. ಮಿಕ್ಕ ವಿಷಯಗಳನ್ನು ಯೋಚಿಸ ಕೆಲಸವಿಲ್ಲ, ಅಂದರೆ- ಕನ್ಯೆಯನ್ನು ಕೊಡುವನು ಇವುಗಳನ್ನು ಚೆನ್ನಾಗಿ ತಿಳಿದು ಕೊಡಬೇಕು.

ಜನ್ಮನಕ್ಷತ್ರ ನಾಮನಕ್ಷತ್ರ ವಿಷಯ.

ಮೂ॥ ದಂಪತ್ಯೋರ್ಜನ್ಮತಾರಾಭ್ಯಾಂನಾಮರ್ಕ್ಷಭ್ಯಾಮಥಾಪಿವಾ ।
ಸ್ತ್ರೀಜನ್ಮತಾರಾಪೂರ್ವಾಭ್ಯಾಮುಖ್ಯಾಯಾತ್ಪ್ರಾಜ್ಞಶ್ಶುಭಾಶುಭಂ॥

ಟೀ॥ ದಂಪತಿಗಳ ಜನ್ಮನಕ್ಷತ್ರಗಳಿಂದಲಾಗಲಿ ನಾಮನಕ್ಷತ್ರಗಳಿಂದಲಾಗಲಿ ಕನ್ಯೆಯನಕ್ಷತ್ರಮೊದಲಾಗಿ ಜ್ಯೋತಿಶಾಸ್ತ್ರಜ್ಞನು ಶುಭಾಶುಭಗಳನ್ನು ಹೇಳತಕ್ಕದ್ದು.

ಮೂ॥ಜನ್ಮಧಿಷ್ಣ್ಯಭವನೋದ್ಭವಮ್ಫಲಜ್ಞಾಮಿನೀಪುರುಷಯೋರ್ವಿ
ಚಿಂತಯೇತ್ । ಜನ್ಮಧಿಷ್ಣ್ಯಭವನಾನಭಿಜ್ಞಯಾನಾಮತೋ
ಖಿಲಮಿದಂವಿಚಿಂತಯೇತ್॥

ಟೀ॥ಸ್ತ್ರೀ ಪುರುಷರಿಗೆ ಜನ್ಮನಕ್ಷತ್ರ ಜನ್ಮರಾಶಿಗಳನ್ನು ವಿಚಾರಿಸಿಶುಭಾಶುಭ ಫಲಗಳನ್ನು ಯೋಚಿಸಬೇಕು. ಅದು ತಿಳಿಯದಿದ್ದರೆ ನಾಮ ನಕ್ಷತ್ರ ರಾಶಿಗಳಿಂದ ಶುಭಾಶುಭಗಳನ್ನು ಚಿಂತಿಸತಕ್ಕದ್ದು.

ಮೂ॥ ಅಜ್ಞಾತಜನ್ಮನಾಂನ್ನೄಣಾಂ ನಾಮಭಮ್ಪರಿಕಲ್ಪಯೇತ್।
ತೇನೈವಚಿಂತಯೇತ್ಸರ್ವಂ ರಾಶಿಕೂಟಾದಿಜನ್ಮವತ್॥

ಟೀ॥ಜನ್ಮನಕ್ಷತ್ರ ತಿಳಿಯದಮನುಷ್ಯರಿಗೆ ನಾಮನಕ್ಷತ್ರವನ್ನೇ ಹಿಡಿಯತಕ್ಕದ್ದು, ಅದರಿಂದಲೆ ರಾಶಿಕೂಟಮುಂತಾದ ಎಲ್ಲಾ ವರ್ಗಗಳನ್ನು ಆಲೋಚಿಸತಕ್ಕದ್ದು.

ಮೂ॥ ಜನ್ಮನಾಜನ್ಮ ಕುರ್ವೀತ ನಾಮನ್ನಾನಾಮ್ನೈವಕಾರಯೇತ್ ।
ಉಭಯಮ್ಬಲಹೀನಂಚೇತ್ಪುಂಜನ್ಮಸ್ತ್ರೀಷುನಾಮತಃ ॥

ಟೀ॥ಪುರುಷನಿಗೂ ಸ್ತ್ರೀಗೂ ಜನ್ಮ ನಕ್ಷತ್ರಗಳನ್ನೇ ಹಿಡಿಯುವದೊಂದು ಪಕ್ಷವು ನಾಮನಕ್ಷತ್ರವನ್ನೇ ಹಿಡಿಯುವದೊಂದುಪಕ್ಷವು ಈ ಎರಡು ಪಕ್ಷಗಳೂ ದುರ್ಬಲಗಳಾಗಿರುವ ಪಕ್ಷದಲ್ಲಿ ಪುರುಷನ ಜನ್ಮ ನಕ್ಷತ್ರದಿಂದಲೂ, ಸ್ತ್ರೀಯ ನಾಮ ನಕ್ಷತ್ರದಿಂದಲೂ ಶುಭಾ ಶುಭಗಳನ್ನು ಯೋಚಿಸತಕ್ಕದ್ದು.

ಏಕ ನಕ್ಷತ್ರ ವಿವಾಹವು.

ಮೂ॥ರೋಹಿಣ್ಯಾರ್ದ್ರಾಮಖೇಂದ್ರಾಗ್ನಿ ತಿಷ್ಯಶ್ರವಣಪೌಷ್ಣಭಂ।
ಅಹಿರ್ಬುಧ್ನ್ಯರ್ಕ್ಷಮೇಷಾಂಚನಕ್ಷತ್ರೈಕ್ಯೇಶುಭಾವಹಃ॥

ಟೀ॥ರೋಹಿಣಿ, ಆದ್ರಾ, ಮಖಾ, ವಿಶಾಖಾ, ಪುಷ್ಯ, ಶ್ರವಣ, ರೇವತೀ, ಉಭಾ, ಈ ನಕ್ಷತ್ರಗಳಲ್ಲಿ ಹುಟ್ಟಿದ ಸ್ತ್ರೀಪುರುಷರು ಒಂದೇ ನಕ್ಷತ್ರದವ ರಾಗಿದ್ದರೂ ಶುಭಕರಗಳು.

ಮೂ ॥ ಅಶ್ವಿನೀಚಯಮಸ್ವಾತಿ ಸಾರ್ಪಫಾಲ್ಗುಣವೈಚ।
ವೈತ್ರವಾರುಣಮೂಲಾಖ್ಯಂನಕ್ಷತ್ರೈಕ್ಯೇಹಿಮಧ್ಯಮಾ॥

ಟೀ ॥ ಅಶ್ವಿನೀ, ಭರಣೀ, ಸ್ವಾತೀ, ಆಶ್ರೇಷಾ, ಪೂರ್ವಫಲ್ಗುನೀ, ಅನೂ, ಶತಭಿಷಕ್, ಮೂಲ, ಈ ೮ ನಕ್ಷತ್ರಗಳಲ್ಲಿ ಹುಟ್ಟಿದ ಸ್ತ್ರೀ ಪುರುಷರಿಗೆನಕ್ಷತ್ರಗಳೊಂದಾಗಿದ್ದರೆ ಮಧ್ಯಮವು.

ಮೂ॥ ಅಹ್ಯೈಕಪಾಚ್ಚವಿಷ್ಠಾಚ ಪುನರ್ವಸ್ವಧಕೃತ್ತಿಕಾ। ಮೃಗಶೀರ್ಷಂ
ಚಚಿತ್ರಾಚಸವಿತೋತ್ತರಫಲ್ಗುನೀ।ಜ್ಯೇಷ್ಠಾಚವಿಶ್ವತೋಯಂಚನಕ್ಷತ್ರೈ
ಕ್ಯೇವಿನಶ್ಯತಿ।ಏಕರಾಶೌಪೃಥಗ್ಧಿಷ್ಣ್ಯೇಚೋತ್ತಮುಪ್ರಾಣಪೀಡನಂ ॥

ಟೀ॥ ಪೂರ್ವಾಭಾದ್ರ, ಧನಿಷ್ಠಾ, ಪುನರ್ವಸು, ಕೃತ್ತಿಕಾ, ಮೃಗಶೀರ್ಷ, ಚಿತ್ರಾ, ಹಸ್ತ, ಉತ್ತರಾ, ಜ್ಯೇಷ್ಠ, ಪೂಷಾ, ಉಷಾ, ಈ ನಕ್ಷತ್ರಗಳಲ್ಲಿ ಹುಟ್ಟಿದ ಸ್ತ್ರೀಪುರುಷರಿಗೆ ನಕ್ಷತ್ರೈಕ್ಯ ವುಂಟಾದರೆ ಸ್ತ್ರೀಪುರುಷರಿಗೆನಾಶ ಕರವಾಗುತ್ತದೆ. ಮತ್ತು ಸ್ತ್ರೀಪುರುಷರಿಗೆ ಜನ್ಮ ರಾಶಿಯೊಂದಾಗಿ ನಕ್ಷತ್ರ ಗಳು ಬೇರೆಯಾಗಿ ಇದ್ದಲ್ಲಿ ವಿವಾಹ ಉತ್ತಮವಾದುದು

ಮೂ॥ ರಾಶ್ಯೈಕ್ಯೇಚೇದ್ಭಿನ್ನಮೃಕ್ಷಂದ್ವಯೋಸ್ಯಾನ್ನಕ್ಷತ್ರೈಕ್ಯೇರಾಶಿ
ಯುಗ್ಮಂತಥೈವ। ನಾಡೀದೋಷೋನೋಗಣಾನಾಂಚದೋಷೋನ
ಕ್ಷತ್ರೈಕ್ಯೇಭಿನ್ನಪಾದಶ್ಶುಭಸ್ಸ್ಯಾತ್॥

ಟೀ॥ದಂಪತಿಗಳೊಂದೇರಾಶಿಯಲ್ಲಿಹುಟ್ಟಿದವರಾಗಿ ಯಿದ್ದರೆ ನಕ್ಷತ್ರಭೇದ ಉಂಟಾದರೂ ಹಾಗೆ ಒಂದೇನಕ್ಷತ್ರದಲ್ಲಿ ಹುಟ್ಟಿದವರಾಗಿದ್ದರೆ ರಾಶಿಭೇದ ಉಂಟಾದರೂ ನಾಡೀ ದೋಷವು ಗಣ ದೋಷವು ಸಹ ಉಂಟಾಗುವದಿಲ್ಲ. ವಧೂವರರು ಒಂದೇ ನಕ್ಷತ್ರದಲ್ಲಿ ಹುಟ್ಟಿದ್ದರೂ ಬೇರೆ ಬೇರೆ ಪಾದಗಳಲ್ಲಿ ಹುಟ್ಟಿದವರಾದರೆ ಅವರ ವಿವಾಹವು ಶುಭಕರವಾಗುವದು.

ಗ್ರಂಥಾಂತರದಲ್ಲಿ.

ಮೂ॥ಏಕರ್ಕ್ಷೈಕಪಾದೇತು ವಿವಾಹಪ್ರಾಣಹಾನಿದಃ।
ದಂಪತ್ಯೋರೇಕನಕ್ಷತ್ರೇಭಿನ್ನಪಾದೇಶುಭಾವಹಃ॥

ಟೀ॥ ಒಂದೇನಕ್ಷತ್ರದಲ್ಲೂ, ಒಂದೇ ಪಾದದಲ್ಲೂ, ಹುಟ್ಟಿದವರಿಗೆ ವಿವಾಹವು ಅವರಿಗೆ ಪ್ರಾಣಹಾನಿಕರವು ಒಂದೇನಕ್ಷತ್ರದಲ್ಲೂ ಬೇರೆಬೇರೆ ಪಾದ

